# ಅಂಗುಷ್ಠದಿಂದ ಅದೃಷ್ಟ

ಆರ್. ಜಿ. ರಾವ್



ಭಾರತೀಯ ಅಂಗುಷ್ಠ ವಿಜ್ಞಾನದಮೇಲೆ ಕನ್ನಡದಲ್ಲಿ
ಪ್ರಪ್ರಥಮ ಗ್ರಂಥ ~ ಸುಮಾರು 300 ಚಿತ್ರ ಸಹಿತ

# ಅಂಗುಷ್ಠದಿಂದ ಅದೃಷ್ಟ

( ಭಾರತೀಯ ಅಂಗುಷ್ಠ ಲಕ್ಷಣಶಾಸ್ತ್ರ—ನಿರಯನ ಪದ್ಧತಿ )



ಲೇಖಕರು :

ಆರ್. ಜಿ. ರಾವ್

ಸಾಂಖ್ಯ-ಹಸ್ತಸಾಮುದ್ರಿಕಶಾಸ್ತ್ರಜ್ಞ, ಬೆಂಗಳೂರು





ಸಮಾಜ ಪುಸ್ತಕಾಲಯ, ಶಿವಾಜಿಬೀದಿ, ಧಾರವಾಡ-೧

# ಒಳ್ಪಿಡಿ

# ಪಡಿಯಚ್ಚುಗಳ ವಿವರ

| ಪುಟಸಂಖ್ಯೆ | ವಿವರಿಸಲ್ಪಟ್ಟ ಚಿತ್ರಗಳು |
|---|---|
| ೪-೧೦ | A. B. C. D. E. F |
| ೧೨ | CH ೧, CH ೨ |
| ೧೩ | CH ೩ |
| ೧೫ | ೩೫ |
| ೧೮-೫೯ | ಮೇಷದಿಂದ ಮೀನಲಗ್ನದ ವರೆಗೆ : ೦-೧, ೧೬೦-೧೬೩, ೧೬೧-೧೬೯, ೧೭೦-೧೭೩, ೧೭೪, ೧೮೦, ೧೮೦-೧೮೮, ೧೮೯-೧೯೪, ೧೯೮-೨೦೨, ೨೦೩-೨೦೮, ೨೦೯-೨೧೪, ೨೧೫-೨೨೩, ೨೨೪-೨೨೯, ೨೩೦-೨೩೨, ೨೨೩-೨೩೫. |
| ೬೦ | Plate No. II |
| ೬೭-೭೬ | ೩೧-೩೪. |
| ೮೧ | ೩೮, ೪೦, ೪೫, ೪೭. |
| ೮೫ | ೪೬, ೪೨, ೭೧, ೫೪. |
| ೯೧ | ೯೦, ೮೬, ೯೫, ೧೦೮; ೮೩, ೯೭. |
| ೯೬ | ೧೦೯, ೧೨೪, ೧೨೫, ೧೨೩, ೧೧೧, ೧೧೨, ೧೧೪, ೧೧೫, ೧೧೨, ೧೧೬. |
| ೧೦೭ | ೩೬, ೧೦೩, ೧೦೪, ೯೧, ೮೨, ೮೪, ೧೩೦, ೧೩೧, ೧೩೨. |
| ೧೧೦ | Plate No. III |
| ೧೧೨ | ದ್ವಾದಶ ರಾಶಿಗಳ ಚಕ್ರ. |
| ೧೧೩ | ಶಂಖ. ಚಕ್ರ, ೧-೫, ಗುರುಬೆರಳು. |
| ೧೧೫-೧೨೦ | ಶಂಖ-ಚಕ್ರಗಳ ಸೂಕ್ಷ್ಮಜ್ಞಾನ ೬, ೭, ೮, ೯ Hiv. |
| ೧೨೨ | ೧೩೮, ೧೮೧, ೩೬, ೮೨, ೮೪, ೯೧, ೧೦೪. |

# ಪ್ರಸ್ತಾವನೆ

ಭಾರತೀಯ ಜ್ಯೋತಿಷ್ಯ ರೇಖಾಶಾಸ್ತ್ರವು ಅದ್ಭುತವೂ ಬಹಳ ಕರಾರು-
ವಾಕ್ಕಾಗಿಯೂ ಇರುವುದೆಂದು ಅನೇಕ ವಿದೇಶ ತಜ್ಞರು ತಮ್ಮ ಗ್ರಂಥಗಳಲ್ಲಿ
ತಿಳಿಸಿದ್ದಾರೆ. ಆದರೆ ನಾನು ಬಾಲ್ಯದಿಂದಲೂ ಈ ಶಾಸ್ತ್ರದಲ್ಲಿ ಆಸಕ್ತಿ ಇಟ್ಟು,
ಅನೇಕ ಪಂಡಿತರುಗಳನ್ನು ಸಂಧಿಸಿ ಒಬ್ಬೊಬ್ಬರಿಂದ ಒಂದೊಂದು ವಿಷಯ
ತಿಳಿಯುವುದು ಅತ್ಯಂತ ಪ್ರಯಾಸವಾಯಿತು. ಹಾಗೂ ಋಷಿಗಳು ರೇಖಾ-
ಶಾಸ್ತ್ರದಲ್ಲಿ, ಏಕಚಕ್ರ ಸಮಾಭೋಗಿ, ದ್ವಿಚಕ್ರ ರಾಜಪೂಜಿತಃ ಮತ್ತು ಮತ್ಸ್ಯ-
ರೇಖೆಯುಳ್ಳವರು ಐಶ್ವರ್ಯವಂತರೆಂದು ಅನೇಕ ಶ್ಲೋಕಗಳಲ್ಲಿ ಹೇಳಿದ್ದಾರೆ.
ಇವನ್ನು ಪ್ರಯೋಗ ನಡೆಸಿದಾಗ ಏಕಚಕ್ರವುಳ್ಳವರು ಊಟ-ಬಟ್ಟೆಗೆ ಶ್ರಮ-
ಪಡುತ್ತಿರುವುದು, ಮೀನಿನ ರೇಖೆಯುಳ್ಳವರು ಹಣವಿಲ್ಲದೆ ಶ್ರಮಪಡು-
ತ್ತಿರುವುದು ಕಂಡುಬಂದಿತು. 'ಆದರೆ ಋಷಿಗಳ ವಾಕ್ಯ ಸುಳ್ಳೆ ?' ಎಂಬ
ಸಂಶಯ ಬಂದಿತು. ವರ್ಷಗಟ್ಟಲೆ ಪ್ರಯೋಗ ನಡೆಸಿದ್ದಾಯಿತು. ಅನಂತರ
ಆಳವಾಗಿ ಸಂಶೋಧನೆ ಮಾಡಲು ಪ್ರಯತ್ನಿಸಿದಾಗ ಸತ್ಯವು ಗೋಚರ-
ವಾಯಿತು.

ಚಕ್ರವು ಸಾಮಾನ್ಯವಾಗಿ ಎಲ್ಲರ ಹಸ್ತದಲ್ಲಿಯೂ ಕಾಣಬಹುದು.
ಆದರೆ ಚಕ್ರವೆಂದ ಮಾತ್ರಕ್ಕೆ ಮನಸ್ಸಿನಲ್ಲಿ ಗಾಡಿಯ ಚಕ್ರ, ಕುಂಬಾರನ
ಚಕ್ರ ಮತ್ತು ಚರಕದ ಚಕ್ರ, ಭಾರತೀಯ ಪುರಾಣದಲ್ಲಿ ಹೇಳುವ ವಿಷ್ಣು-
ಚಕ್ರ, ಶ್ರೀಚಕ್ರ, ಶಿವಚಕ್ರ, ನವಗ್ರಹ ಚಕ್ರ ಮುಂತಾದವು ಮನಸ್ಸಿನಲ್ಲಿ
ಬರುವವು. ಹೀಗಿರುವಾಗ ಯಾವ ಚಕ್ರ ಭಾಗ್ಯದಾಯಕವೆಂದು ನಿರ್ಧರಿ-
ಸುವುದು ಮುಖ್ಯ ? ಹಾಗು ಗಾಡಿಯ ಚಕ್ರ ಭಿನ್ನವಾದರೆ ಗಾಡಿಯು
ಮುಂದೆ ಸಾಗಲಾರದು; ಹಾಗು ಪ್ರಯಾಣ ಮಾಡಿದರೆ ಮಧ್ಯದಲ್ಲಿ ಅಕ-

ಸ್ತ್ರೀಕ ತೊಂದರೆ ಆಗಬಹುದು. ಆದ ಪ್ರಯುಕ್ತ ಚಕ್ರದ ಆಕಾರ, ಅದರ ಪರಿಶೀಲನೆ ಆಗತ್ಯ. ಅದೇ ರೀತಿ ಮೀನು, ಪದ್ಮ, ದೇವಾಲಯ, ಪಲ್ಲಕ್ಕಿ ಯವ-ರೇಖೆಗಳು ಯಾವ ಗ್ರಹಸ್ಥಾನದಲ್ಲಿ ಯಾವ ಯಾವ ರೇಖೆಗಳ ಶವಾಗಮದಿಂದ ಉಂಟಾಗಿವೆ ಎಂದು ಪರಿಶೀಲಿಸುವುದು ಅತಿ ಮುಖ್ಯ.

ನಾಡೀಗ್ರಂಥಗಳೆಂದು ಹೆಸರಾದ (ತಾಳೆಗರಿ ಗ್ರಂಥದಲ್ಲಿ ಮಾನವನ ಪೂರ್ಣಭವಿಷ್ಯವರ್ಣನೆ) ನಂದಿನಾಡಿ, ರಾವಣ ಸಂಹಿತೆ, ಶುಕನಾಡಿ ಗ್ರಂಥ ಮತ್ತು ಪಂಡಿತರ ಸಹಾಯದಿಂದ ತಿಳಿದ ವಿಷಯಗಳನ್ನು ಅನೇಕ ಪ್ರಯೋಗ ನಡೆಸಿ, ಸತ್ಯಾಂಶ ದೊರೆತ ಮೇಲೆ ಪ್ರಾಯೋಗಿಕ ಅಂಗುಷ್ಠ ಮುದ್ರೆಯೊಡನೆ ವರ್ಣಿಸಿರುತ್ತೇನೆ. ಈ ಮೂಲ ಗ್ರಂಥಗಳು ಸಂಸ್ಕೃತ, ತಮಿಳು, ಪಾಲೀ ಭಾಷೆಗಳಲ್ಲಿರುವುವು. ರವಿ, ನಂದಿನಾಡಿ, ಶುಕನಾಡಿಗಳಲ್ಲಿ ಹಸ್ತದಲ್ಲಿರುವ ಒಂದೊಂದು ಚಿತ್ನಗಳಿಂದಲೇ ವ್ಯಕ್ತಿಯು ಹುಟ್ಟಿದ ತಾರೀಖುಗಳನ್ನು, ಪೂರ್ವಜನ್ಮಗಳನ್ನು ಹೇಳಿದೆ. ಆದರೆ ರಾವಣಸಂಹಿತೆಯಲ್ಲಿ (ತಮಿಳು ಗ್ರಂಥ) ಹೆಬ್ಬೆರಳಲ್ಲಿರುವ ಗುಢಚಿಹ್ನೆಯಿಂದ ಜನ್ಮಲಗ್ನ ಮತ್ತು ಸಂಪೂರ್ಣ ಚರಿತ್ರೆಯ ವರ್ಣನೆ ಇರುವುದು.

"ಯುವರ್ ಡೆಸ್ಟಿನಿ ಇನ್ ಥಂಬ್". "Your destiny in thumb" ಗ್ರಂಥದಲ್ಲಿ ಲಗ್ನನಿರ್ಧಾರ ಮತ್ತು ನಿರ್ದಿಷ್ಟ ಫಲವರ್ಣನೆ ಮಾಡಿರುವುದು. ಈ ಗ್ರಂಥ ಹೊರಬರಲು ಮೂಲಪ್ರತಿಯ ಗುಟ್ಟುಗಳನ್ನು ತಿಳಿಸಿದ ಪೂಜ್ಯರಾದ ಶ್ರೀ ವೆಂಕಟರಾಮಯ್ಯನವರಿಗೆ ನನ್ನ ಹೃತ್ಪೂರ್ವಕ ವಂದನೆಗಳು.

ಪಂಡಿತರುಗಳ ಸಹಾಯದಿಂದ ಮತ್ತು ಓದುಗರ ಪ್ರೋತ್ಸಾಹದಿಂದ, ಮುಂದೆ ಹಸ್ತದ ಬೆರಳುಗಳಿಂದ ಜನ್ಮಕುಂಡಲಿಯನ್ನು ತೆಗೆಯುವ ವಿಧಾನ ವನ್ನು ಸುವರಾರು ಚಿತ್ರಗಳೊಡನೆ ಗ್ರಂಥಪ್ರಕಾಶನ ಮಾಡಲು ಇಚ್ಛಿಸಿರು- ತ್ತೇನೆ. ಈಗಾಗಲೇ ವಿವಿಧ ಭಾಷಾಮೂಲ ಗ್ರಂಥಗಳನ್ನು ಆಂಗ್ಲ ಭಾಷೆಗೆ ತರ್ಜುಮೆ ಮಾಡಲು ಪ್ರಯತ್ನಿಸಿದ್ದೇನೆ. ಪ್ರಕಾಶಕರಿಗೆ ಹೃತ್ಪೂರ್ವಕ ವಂದನೆಯೊಡನೆ ಪ್ರಸ್ತಾವನೆಯನ್ನು ತಮ್ಮೆಲ್ಲರಿಗೆ ಅರ್ಪಿಸಿರುತ್ತೇನೆ.

॥ ಹರಿಃ ಓಂ ॥

# ಅಂಗುಷ್ಠದಿಂದ ಅದೃಷ್ಟ

ಮಾನವನ ನಿತ್ಯ ಕಾರ್ಯಗಳಲ್ಲಿ ಬೆರಳುಗಳ ಸಹಕಾರ ಮುಖ್ಯ, ಆದರೆ ಎಲ್ಲ ಬೆರಳುಗಳಿಗಿಂತಲೂ ಹೆಬ್ಬೆರಳುಗಳ ಸಹಾಯ-ಸಹಕಾರ ಮಹತ್ತರವಾದುದು. ಹೆಬ್ಬೆರಳುಗಳನ್ನು ಬಿಟ್ಟು ಉಳಿದ ನಾಲ್ಕು ಬೆರಳುಗಳೂ ಕಾರ್ಯಾಕಾರ್ಯಗಳಲ್ಲಿ ಸುಲಲಿತವಾಗಿ ಸಹಕರಿಸಲಾರವು. ಅದೂ ಅಲ್ಲದೆ ಹೆಬ್ಬೆರಳು ದಪ್ಪ ಮತ್ತು ಅಗಲದಲ್ಲಿ ಪ್ರಧಾನವಾದದ್ದು. ಅಂದರೆ ಮನೆಯಲ್ಲಿ ಯಾವ ಕಾರ್ಯ ಮಾಡಬೇಕಾದರೂ, ಹೇಗೆ ಮನೆಯ ಯಜಮಾನನ ಒಪ್ಪಿಗೆಯಿಲ್ಲವೆ ಆಗಲಾರದೋ, ಹಾಗೆಯೇ ಹಸ್ತದ ಕೆಲಸವೂ ಕೂಡ. ಉಳಿದ ನಾಲ್ಕು ಬೆರಳುಗಳಲ್ಲಿ ಯಾವುದೊಂದು ಇಲ್ಲದಿದ್ದರೂ ಕೆಲಸ ತಕ್ಕಮಟ್ಟಿಗೆ ಸಾಧ್ಯ. ಆದರೆ ಹೆಬ್ಬೆರಳಿಲ್ಲದಿದ್ದರೆ ಕೈಯ ಕೆಲಸ ಅತಿ ಶ್ರಮದಾಯಕ.

ಜ್ಯೋತಿಷ್ಯಶಾಸ್ತ್ರದಲ್ಲಿ ಲಗ್ನದಿಂದಲೆ ವ್ಯಕ್ತಿಯ ಪೂರ್ಣಭವಿಷ್ಯನನ್ನು ಹೇಳಬಹುದೆಂದು ತಜ್ಞರು ವ್ಯಕ್ತಪಡಿಸಿರುವರು. ಅದೇ ರೀತಿ ಹೆಬ್ಬೆರಳಿನಿಂದಲೇ ( ಅಂಗುಷ್ಠ ) ವ್ಯಕ್ತಿಯ ಸಂಪೂರ್ಣ ಜೀವನಚರಿತ್ರ, ಗುಣವಿಶೇಷ, ಹುಟ್ಟಿದ ಲಗ್ನ, ಗ್ರಹಗಳ ಸ್ಥಾನಗಳನ್ನು ಹೇಳಬಹುದೆಂದು ಋಷಿಗಳು, ಪೂರ್ವಜರು ಹಿಂದೂ ಸಾಮುದ್ರಿಕ ಶಾಸ್ತ್ರದಲ್ಲಿ ವರ್ಣಿಸಿದ್ದಾರೆ. ಸಮುದ್ರರಾಜನೂ ಸಹ ಅಂಗುಷ್ಠದಿಂದ ಭವಿಷ್ಯವನ್ನು ವರ್ಣಿಸಿರುವನು.

ಅಂಗುಷ್ಠದ ಬಣ್ಣ, ಉದ್ದ, ಅಗಲ, ಆಕಾರ ಮತ್ತು ಅವರಲ್ಲಿ ಗೂಢವಾಗಿರುವ ಚಿಹ್ನೆ (ರೇಖೆ)ಗಳು ಅತಿ ಮುಖ್ಯವಾದುವು. ಅಂಗುಷ್ಠದಲ್ಲಿ ಸಾಮಾನ್ಯವಾಗಿ ೨೭ ವಿಧಗಳು. ಆದರೆ ಆ ಪೈಕಿ ಮುಖ್ಯವಾದವು ೬ ವಿಧಗಳು ಮಾತ್ರ. ಅವು ಸರ್ವಸಾಮಾನ್ಯವಾಗಿರುವವು.

ಅಂಗುಷ್ಠದ ಬಣ್ಣ, ಉದ್ದಗಳಲ್ಲಿ ಕಾಲ ದೇಶವನ್ನು ಅರಿಯಬೇಕು. ಕೆಲವು ದೇಶಗಳ ಜನರು ಅತಿ ಎತ್ತರವಾಗಿರುವರು. ಮತ್ತೆ ಕೆಲವು ದೇಶಗಳಲ್ಲಿ ಕುಬ್ಜರಾಗಿರುವರು. ಇನ್ನು ಕೆಲವು ದೇಶಗಳ ಜನರು ಮಧ್ಯಮ ಎತ್ತರದವರಿರುವರು.

ಬಣ್ಣದಲ್ಲಿ ಉಷ್ಣವಲಯ, ಶೀತವಲಯ, ಸಮಶೀತೋಷ್ಣವಲಯದವರು ಇರುವರಷ್ಟೆ? ಅವರವರ ಬಣ್ಣಗಳೂ ಬೇರೆ ಬೇರೆ. ಆಯಾ ದೇಶದ ಜನರ ಬಣ್ಣಕ್ಕೆ ಅನುಸಾರವಾಗಿಯೂ ದೇಶ, ಕಾಲ, ವರ್ತಮಾನಗಳ ಪ್ರಕಾರವೂ ನಿಷ್ಕರ್ಷೆ ಮಾಡುವುದು ಯುಕ್ತ.

ಅಂಗುಷ್ಠವು ಮೃದುವಾದ ಚರ್ಮದ ಹೊದಿಕೆಯುಳ್ಳದ್ದಾಗಿದ್ದರೆ ಅಂಥವರು ವಿಶೇಷ ಭಾಗ್ಯ, ಕೀರ್ತಿ, ಶ್ರಮವಿಲ್ಲದ ನಿರಾಯಾಸ ಸುಖ ಜೀವನ ಅನುಭೋಗಿಸುವರು.

ಬಿಳುಪು, ಮಾಸಲು-ಬಿಳುಪು ವರ್ಣವುಳ್ಳವರು ಆತುರ, ಕೋಪವುಳ್ಳವರು, ಸಾಮಾನ್ಯ ಸುಖಿಗಳು. ಕಪ್ಪು ಬಣ್ಣವಿದ್ದು ಸುಂದರ ಆಕಾರವುಳ್ಳ ಬೆರಳುಗಳುಳ್ಳವರು ಸುಖಿಗಳು. ಆದರೆ ಸ್ವಲ್ಪ ವಾಯುರೋಗಕ್ಕೆ ತುತ್ತಾಗುವರು. ಬಿಳುಪು, ಹಳದಿ ಮಿಶ್ರವುಳ್ಳ ಬೆರಳುಳ್ಳವರು ಶ್ರಮದಿಂದ ಜೀವನ ಸಾಗಿಸುವರು.

ಚಿತ್ರ (A) ಸ್ತಂಭಾಕಾರವಾದ (ಮೋಟಿಯಂಥ) ಈ ಹೆಬ್ಬೆರಳು ಹಿಂಬದಿಗೆ ಬಾಗುವುದಿಲ್ಲ. ಅದು ದುಂಡಾಗಿ ಮಾಂಸ ತುಂಬಿರಲಾರದು. ನಟ್ಟನೆ ತಲೆ ಎತ್ತಿ ಕಂಬದ ಆಕಾರದಲ್ಲಿ ನಿಂತಿರುವುದು.




ಈ ರೀತಿಯ ಹೆಬ್ಬೆರಳು ಉಳ್ಳವರು ಯಾವ ವಿಷಯದಲ್ಲಿಯೂ ಪಾಂಡಿತ್ಯ ಹೊಂದಿರಲಾರರು. ಎಲ್ಲದರಲ್ಲಿಯೂ ಅಲ್ಪಸ್ವಲ್ಪ ಅನುಭವವುಳ್ಳವರು. ಆದರೂ ತಮಗೆ ತಿಳಿದಿರುವುದೇ ಮಹತ್ತರ ಸತ್ಯವೆಂದು ಸಾಧಿಸುವವರು. ತಾವು ಮಾಡುವ ಕಾರ್ಯ ಅಸಾಧ್ಯವಾದುದೆಂಬ ಮನೋಭಾವ ಇವರದು. ಬಾಲ್ಯದಿಂದಲೂ ಹಟವುಳ್ಳವರು, ತಾಳ್ಮೆ ಅತ್ಯಲ್ಪ. ಕೋಪಪ್ರತಾಪ ಬಹಳ. ಆದರೆ ಅದರಿಂದ ಯಾವ ಗುರಿ ಸಾಧಿಸಲೂ ಸಾಧ್ಯವಿಲ್ಲ. ಸರ್ವಸಾಮಾನ್ಯವಾದ ವೃತ್ತಿಗಳಿಂದ ಜೀವನ ಸಾಗಿಸುವರು.

ಒಂದು ವೇಳೆ ಉನ್ನತ ಹುದ್ದೆಯಲ್ಲಿದ್ದರೂ ಇವರಿಗೆ ಶತ್ರುಗಳು ಹೆಚ್ಚಾಗಿರುತ್ತಾರೆ. ಇವರು ಆಲೋಚನೆ ಇಲ್ಲದೆ ಆತುರದಿಂದ ಮುನ್ನುಗ್ಗಿ ಅನೇಕ ತೊಂದರೆಗಳಿಗೆ ಒಳಗಾಗುವರು.

ಇಂಥ ಹೆಬ್ಬೆರಳುಳ್ಳವರು ತಾಂತ್ರಿಕವೃತ್ತಿ, ಸಾಮಾನ್ಯ ದರ್ಜೆಯ ವೃತ್ತಿಗಳಲ್ಲಿ ಮಾತ್ರ ದಕ್ಷರಾಗಲು ಸಾಧ್ಯ. ಆಗಾಗ ವೃತ್ತಿಯನ್ನು ಬದಲಾಯಿಸುವ ಗುಣವೂ ಇರುತ್ತದೆ. ಈ ರೀತಿಯ ಅಂಗುಷ್ಠದವರಿಗೆ ೨೮ ರಿಂದ ೩೦ ನೆಯ ವಯಸ್ಸಿನೊಳಗೆ ಜೀವನ ನೆಲನಿಲ್ಲುವುದು; ಭಾಗ್ಯಕಾಲ ಬರುವುದು. ಇವರಲ್ಲಿ ಸ್ವಾರ್ಥ ಸ್ವಲ್ಪ ಹೆಚ್ಚು. ರಸಿಕತೆ ಮತ್ತು ಆಧ್ಯಾತ್ಮಿಕತೆ ಸಾಮಾನ್ಯ. ಇವರು ಐಶ್ವರ್ಯವಂತರಾದರೂ ಸಹ ಸ್ವಾರ್ಥದಿಂದದೂರ ವಿರಲಾರರು. ಸಂಸಾರಜೀವನ ಅಲ್ಪಸ್ವಲ್ಪ ಮನಸ್ತಾಪದಿಂದಲೇ ನಡೆಯುತ್ತದೆ. ಈ ರೀತಿಯ ಬೆರಳು ಸ್ತ್ರೀಯರಿಗೆ ಇದ್ದರೆ ಡಾಂಭಿಕರೂ, ದರ್ಪಶಾಲಿನಿಯರೂ ಆಗಿರುತ್ತಾರೆ.

ಎಚ್ಚರಿಕೆ :— ಅಲ್ಪಸ್ವಲ್ಪ ಉಷ್ಣಸಂಬಂಧವಾದ ವ್ಯಾಧಿಗಳೂ ತೊಂದರೆಕೊಡುತ್ತವೆ. ಎಚ್ಚರಿಕೆ ವಹಿಸಬೇಕು. ಜ್ಞಾನವೃದ್ಧಿಗೆ ಪ್ರಯತ್ನಿಸಬೇಕು. ಆತುರದಿಂದ ಕೆಲಸ ಮಾಡುವುದು. ಸಾಮಾನ್ಯ ವಿಷಯಕ್ಕೆಲ್ಲ ಕೋಪ ತಾಳುವುದು. ಇಂಥದನ್ನು ಬಿಡಬೇಕು. ವಿವೇಚನಾಶಕ್ತಿಯನ್ನು ಬೆಳೆಸಿಕೊಳ್ಳಬೇಕು. ಹೀಗೆ ಎಚ್ಚರಿಕೆ ವಹಿಸಿದರೆ ಜೀವನ ಆದಷ್ಟು ಸುಖಕರವಾಗುವುದು.

ಚಿತ್ರ (B) (ಪುಟ ೪) ಹೆಬ್ಬೆರಳು ಖಡ್ಗಾಕಾರವಾಗಿರುತ್ತದೆ, ಇದನ್ನು ಹೊಂದಿರುವವರು ನಿಧಾನ ನಡಿಗೆಯುಳ್ಳವರು, ಯಾವ ಕಾರ್ಯಕ್ಕೆ ಪ್ರಯತ್ನಿಸಿದರೂ ಕ್ರಮವಾಗಿ, ನಿರ್ದಿಷ್ಟವಾಗಿ ಪರ್ಯಾಲೋಚನೆ ಮಾಡಿ ಮುಂದುವರಿಯುವವರು. ಸ್ವಲ್ಪ ಆತುರವುಳ್ಳವರಾಗಿದ್ದರೂ ತಪ್ಪುಮಾಡಿದರೆ ತಕ್ಷಣ ಸರಿಮಾಡಿಕೊಳ್ಳುವವರು, ಬಾಲ್ಯದಿಂದಲೂ ಸುಖವುಳ್ಳವರು ಮತ್ತು ವಿಶೇಷ ಕೀರ್ತಿವಂತರೂ, ಐಶ್ವರ್ಯವಂತರೂ, ದರ್ಪಶಾಲಿಗಳೂ ಆದ ವಂಶಜರು ಆಗಿರಲು ಸಾಧ್ಯ. ಯಾವ ವಿದ್ಯೆಯನ್ನು ಅಭ್ಯಸಿಸಿದರೂ ಪಾಂಡಿತ್ಯ ಗಳಿಸುವವರು; ಆತ್ಮಗೌರವಕ್ಕೆ ಶ್ರಮಿಸುವವರು. ಪರರ ಮಾತುಗಳಿಗೆ ಕಿವಿಕೊಡುವ ಸ್ವಭಾವದವರಲ್ಲ. ಸ್ವಲ್ಪ ಸ್ವಾರ್ಥವೇನೋ

ಉಂಟು. ದರ್ಪಶಾಲಿಗಳು. ಇವರಿಗೆ ಅಧಿಕಾರದ ಆಸೆ, ಹತ್ತಾರು ಜನ-ರನ್ನು ಆಳುವಂತಹ ಸಾಮರ್ಥ್ಯವಿರುತ್ತದೆ. ಭೋಗವಸ್ತುಗಳ ಆಸಕ್ತಿ ಹೆಚ್ಚು. ನಿಪುಣರು, ಕಾಲಕ್ಕೆ ಸರಿಯಾಗಿ ಊಟ, ತಿಂಡಿ, ನಿದ್ರೆ ಅನು-ಭವಿಸುವವರು, ಮನಸ್ಸುಬಂದರೆ ದಾನ-ಧರ್ಮ ಉಂಟು. ಈ ರೀತಿಯ ಹೆಬ್ಬೆರಳುಳ್ಳವರು ವೈದ್ಯರಾಗಿಯೋ ನ್ಯಾಯಾಧೀಶರಾಗಿಯೋ, ರಾಜಕಾರಣ ಪಟುಗಳಾಗಿಯೋ ಇರುತ್ತಾರೆ. ಭವ್ಯವಾದ ಗೃಹ, ದ್ರವ್ಯಶೇಖರಣೆ, ಛತ್ರ, ಆಸ್ಪತ್ರೆ, ದೇವಸ್ಥಾನ, ವಿದ್ಯಾಮಂದಿರಗಳಿಗೆ ಪ್ರೋತ್ಸಾಹ ಮೊದಲಾದ ಪರೋಪಕಾರಗಳನ್ನು ಮಾಡುವವರು. ಒದಕ್ಕಿಂತ ಹೆಚ್ಚಿನ ಸ್ತ್ರೀಸುಖ-ವುಳ್ಳವರು. ಆದರೂ ಸಂಸಾರ, ಬಂಧು-ಬಳಗದಲ್ಲಿ ಹೆಚ್ಚು ವಿಶ್ವಾಸ, ಪ್ರೀತಿ ಯುಳ್ಳವರಾಗಿರುತ್ತಾರೆ. ಇವರು ಪ್ರಾರಂಭದಿಂದಲೇ ಅಧಿಕಾರವನ್ನು ಹೊಂದುವವರು, ಧೈರ್ಯೋತ್ಸಾಹಿಗಳು, ಹಟ ಇಲ್ಲ, ಆದರೂ ಬಾವರಂತೂ ಸಾಧಿಸಿಯೇ ಬಿಡುವರು. ಇವರು ಹೇಳಿದಂತೆ ಕೇಳಿದವರಿಗೆ ತಮ್ಮ ತನು-ಮನ-ಧನಗಳನ್ನು ಅರ್ಪಿಸಿ ಸಹಕರಿಸುವರು.

ಸ್ತ್ರೀಯರ ಹಸ್ತದಲ್ಲಿ ಇಂಥ ಬೆರಳು ಇದ್ದರೆ ಮನೆಗೆ ಅಧಿಕಾರಿಣಿಯೂ ರಾಗುವರು. ಪತಿಯನ್ನು ಸಹ ತಮ್ಮ ಅಂಕಿತದಲ್ಲಿಟ್ಟುಕೊಳ್ಳುವರು. ಸಂಸಾರದಲ್ಲಿ ಎಂಥ ಕಷ್ಟ ಬಂದರೂ ಧೈರ್ಯಗೆಡದೆ ಎದುರಿಸುವರು. ಪರ ರಿಗಾಗಿ, ಸಮಾಜಕ್ಕಾಗಿ ಶ್ರಮಿಸುವರು. ಸುಖಭೋಜನ ಮಾಡುವರು. ಬೆಲೆ ಬಾಳುವ ವೈಭವದ ವಸ್ತುಗಳನ್ನು ಶೇಖರಿಸುವರು. ಸ್ವಲ್ಪ ವಾಯು-ರೋಗದ ತೊಂದರೆ ಇರುತ್ತದೆ. ಇವರಿಗೆ ೨೧, ೨೫ ನೆಯ ವಯಸ್ಸಿನಲ್ಲಿ ಭಾಗ್ಯೋದಯವಾಗುವುದು.

ಎಚ್ಚರಿಕೆ:— ಇವರಿಗೆ ಸ್ವಲ್ಪಮಟ್ಟಿಗೆ ಶತ್ರುಗಳು ಇರುತ್ತಾರೆ. ತಾಳ್ಮೆ ಅವಶ್ಯ. ಉಷ್ಣವಾಯು, ಶ್ರಮಗಳ ತೊಂದರೆ ಬರದಂತೆ ಎಚ್ಚರಿಕೆ ವಹಿಸಬೇಕು. ಲಗ್ನದಲ್ಲಿ ಶುಭಗ್ರಹ ರಾಜಗ್ರಹವಿರುತ್ತದೆ. ಇಲ್ಲವೆ ಈ ಗ್ರಹಗಳ ಪೂರ್ಣ ದೃಷ್ಟಿಯಾದರೂ ಬಿದ್ದಿರುತ್ತದೆ. ಜೀವನದುದ್ದಕ್ಕೂ ವೈಭವಜೀವನ ಇವರದಾಗಿರುತ್ತದೆ.

ಚಿತ್ರ (C) ಸ್ವಲ್ಪಮಟ್ಟಿಗೆ ಧನುಸ್ಸಿನ ಆಕಾರವಾಗಿ ಹೆಬ್ಬೆರಳ ಮೇಲ್ಭಾಗವು ಬಾಗಿರುವುದು. ಈ ಜನ ವಿಶಾಲಹೃದಯರು, ವಿದ್ಯಾ-




ವಿನಯ ಸಂಪನ್ನರು, ಮೃದುಭಾಷಿಗಳು, ಕಲಾಭಿಮಾನಿಗಳು, ಶ್ರಮದಿಂದ ಉನ್ನತ ಪದವಿ ಪಡೆಯುವವರು, ಎರಡು ಅಥವಾ ಮೂರುಬಾರಿ ವೃತ್ತಿಗಳನ್ನು ಬದಲಾಯಿಸುವವರು, ಯಾವಾಗಲೂ ಶಾಂತಿ-ತಾಳ್ಮೆಯುಳ್ಳವರು, ಗಲಾಟೆ, ಜಗಳಗಳಿಗೆ ಮನಸ್ಸು ಕೊಡದವರು, ಸ್ವಲ್ಪ ಅಶಾಂತಿಯಾದರೂ ಜೀವನವೇ ಬೇಸರವಾದಂತೆ ಭಾವಿಸುವವರು, ಪತ್ನಿಯ ಮಾತಿಗೆ ಬೆಲೆ ಕೊಡುವವರು, ತಾವು, ತಮ್ಮ ಮನೆ, ಮಕ್ಕಳ ಸುಖಕ್ಕೆ ವಿಶೇಷ ಶ್ರಮಪಡುವವರು. ಪರರ ಗಂಟು ತಮಗೆ ಬೇಡ. ತಮ್ಮ ಗಂಟು ಪರರಿಗೆ ಬೇಡ, ತಮ್ಮ ಕೆಲಸವೆಷ್ಟೋ ಅಷ್ಟು-ಇಂತಹ ಗುಣವುಳ್ಳವರು. ಇವರಿಗೆ ಏನೇ ಕಷ್ಟಗಳು ಬಂದರೂ ೨೩, ೨೭, ೩೩, ೪೩ನೆಯ ವಯಸ್ಸಿನಲ್ಲಿ ಬರುವವು. ಇವರಲ್ಲಿ ದೈವಿಕಶಕ್ತಿ, ಆಧ್ಯಾತ್ಮಿಕ ಬೆಳವಣಿಗೆ ಇರುತ್ತದೆ. ಆದಾಯಕ್ಕೆ ತಕ್ಕ ವ್ಯಯ ಮಾಡುವವರು ಜವಷ್ಟು ದ್ರವ್ಯ ಶೇಖರಣೆ ಮಾಡುವರು. ಇವರು ಶೇಖರಿಸುವ ಕಾಲ ೩೬ನೆಯ ವಯಸ್ಸಿನಿಂದ ಸ್ಥಿರವಾಗುವುದು. ಅಂದರೆ ಭಾಗ್ಯೋದಯ ೩೬. ೪೦ ಈ ವಯಸ್ಸುಗಳಿಂದ.

ಸ್ತ್ರೀಯರಿಗೂ ಮೇಲಿನ ಗುಣವೇ ಅನ್ವಯಿಸುವುದು. ಇವರಿಗೆ ಸೌಮ್ಯ ಶುಭಗ್ರಹಗಳ ದೃಷ್ಟಿ ಇರುವುದು.

ಎಚ್ಚರಿಕೆ :— ಕಫ, ವಾತ, ಶೀತದಿಂದ ಶ್ರಮವಾಗಬಹುದು. ಎಚ್ಚರ ವಿರಬೇಕು. ತೊಂದರೆ ಬಾದರೂ ಧೈರ್ಯದಿಂದ ಎದುರಿಸಬೇಕು. ಇರುವ ಅಲ್ಪಸ್ವಲ್ಪ ಅನುಮಾನವನ್ನು ದೂರಮಾಡಬೇಕು. ಹಾಗಾದರೆ ಶುಭ ಫಲ.

ಚಿತ್ರ (D) ಬಾಣಾಕಾರವಾಗಿ ಹಿಂದಕ್ಕೆ ಬಾಗುವ ಈ ಅಂಗುಷ್ಠದವರಿಗೆ ನರಗಳ ನಿಶ್ಶಕ್ತಿ ಇರುತ್ತದೆ. ಹೃದಯ ಬಿಚ್ಚಿ ಮಾತನಾಡುವರು, ಒಳ್ಳೆಯ ಭಾಷಣಕಾರರು. ಪರರನ್ನು ಮಾತಿನಿಂದಲೇ ಮರಳು ಮಾಡುವವರು. ತಮ್ಮ ತಪ್ಪುಗಳನ್ನು ತಾವು ಅರಿಯುವಾರರು. ಬಾಲ್ಯದಿಂದಲೂ ಶ್ರಮ, ಯಾರ ಸಹಾಯವೂ ಇಲ್ಲದ ಸ್ವಪ್ರಯತ್ನದಿಂದ ಶುಭ ಅದೃಷ್ಟಕ್ಕೆ, ವಿದ್ಯೆಗೆ ವಿಶೇಷ ಶ್ರಮಪಡುವರು. ಆದರೆ ಜಯ ಅಲ್ಪ, ಚಾಂಚಲ್ಯ, ಹಿಡಿ

ಕೆಲಸವೊಂದನ್ನೂ ನಿರ್ಧಾರವಾಗಿ ಮಾಡಲಾರರು. ಆಕಾಶಕ್ಕೆ ಏಣಿ ಹಾಕುವ ಲೆಕ್ಕಾಚಾರ. ಇದರಿಂದ ಬಾಗಿಲಿಗೆ ಬಂದ ಅದೃಷ್ಟ ದೂರ. ಮಾತಿನಲ್ಲಿ ಧೈರ್ಯ, ಚಾಣಾಕ್ಷತೆ, ಆದರೆ ಕಾರ್ಯತತ್ಪರತೆಯಲ್ಲಿ ಹಿಂದುಳಿಯುವಿಕೆ. ಎಷ್ಟೇ ಸಂಪಾದಿಸಿದರೂ ಅಲ್ಲಿಗಲ್ಲಿಗೇ ಸಮ. ಇನ್ನೂ ಸ್ವಲ್ಪ ಸಾಲ. ನಾನಾ ವೃತ್ತಿ ಅವಲಂಬಿಸುವರು. ಆದರೆ ಲಾಭ ಅತ್ಯಲ್ಪ. ಆಗಾಗ್ಗೆ ತಲೆನೋವು, ಉದರಬೇನೆ, ನಿಶ್ಶಕ್ತಿ; ಸಾಮಾನ್ಯವಾದ ವೃತ್ತಿಗಳಿಂದ ಭಾಗ್ಯ. ನೂರಕ್ಕೆ ಒಬ್ಬರಿಗೆ ಅಧಿಕಾರ. ಅಧಿಕಾರದಲ್ಲೂ ಇವರಿಗೆ ಮೋಸ, ಶತ್ರುಗಳಿಂದ ಕೊಂದರೆ, ಸಂಸಾರದಲ್ಲಿ ಆಗಾಗ ಅಶಾಂತಿ. ಇವರಿಗೆ ( A. B ) ಇಂಥ ಹೆಬ್ಬೆರಳು ಇರುವಂತಹರು ಪತ್ನಿಯಾದರೆ ಪತ್ನಿಯೇ ಮಾರ್ಗದರ್ಶಕಳಾಗುವಳು. ಇವರ ಐಶ್ವರ್ಯಕಾಲವೆಂದರೆ ಳಳನೆಯ ವಯಸ್ಸಿನ ಅನಂತರ. ಸ್ತ್ರೀಯರಿಗೂ ಈ ಗುಣವೇ.

ಎಚ್ಚರಿಕೆ :— ಸಾಮಾನ್ಯ ವಿಷಯವನ್ನು ಪರ್ವತಾಕಾರವಾಗಿ ತಿಳಿಯುವುದು, ಪರರ ಮಾತಿಗೆ ಕಿವಿಗೊಡುವುದು, ಆಡಿದ ಮಾತಿಗೆ ತಪ್ಪುವುದು ಇವು ದೂರಾಗಬೇಕು. ಧೈರ್ಯ, ವಿವೇಚನೆ, ಮಿತಭಾಷಣ ಬೆಳೆಸಿಕೊಳ್ಳಬೇಕು. ರಾತ್ರಿಯೆಲ್ಲಾ ಯೋಚಿಸಿ ನಿದ್ದೆಗೆಟ್ಟು ತಲೆ ಕೆಡಿಸಿಕೊಳ್ಳಬಾರದು. ನರದುರ್ಬಲತೆ, ಚಂಚಲವಾಗದಂತೆ ಗಮನ ಕೊಡಬೇಕು, ರಾಜಗ್ರಹ, ಶುಭಗ್ರಹಗಳ ವೀಕ್ಷಣೆ ಕಡಿಮೆ.

ಚಿತ್ರ (E) ಈ ಹೆಬ್ಬೆರಳು ಹಿಂಬದಿಗೆ ಬಾಗುವುದು ಮತ್ತು (೨) ಕಂಠಭಾಗವು ಅತಿ ಸಣ್ಣದು. (೩) ಮುಖಭಾಗವು ಅತಿ ಉಬ್ಬಿರುವುದು. (೪) ಶಿರಭಾಗವು ಮೊಟಕು ಮತ್ತು ತುಂಬ ಸಣ್ಣದಾಗಿರುವುದು. ಇಂಥ




ಹೆಬ್ಬೆರಳುಳ್ಳವರು ತರ್ಕದಲ್ಲಿ ಪಂಡಿತರು. ಅತಿ ಯಾದ ಸ್ವಾಭಿಮಾನ, ಹೆಚ್ಚಾಗಿ ಜನರಲ್ಲಿ ಸಹಕರಿಸಿ ಮಿಳಿತವಾಗುವುದಿಲ್ಲ. ಕಷ್ಟದಿಂದ ಮುಂದುವರಿಯುವರು. ಪೂರ್ಣ ವಿದ್ಯಾವಂತರಾಗಲು ಸಾಧ್ಯವಿಲ್ಲ. ತಮಗೆ ತಿಳಿದಷ್ಟು ವಿಷಯಗಳನ್ನು ಪುನಃ ಪುನಃ ವಿಮರ್ಶಿಸಿ ನಿರ್ಧಾರಮಾಡಿಕೊಳ್ಳುವರು. ಅಕ್ಷರಗಳನ್ನು ಸುಂದರವಾಗಿ, ಬಿಡಿಬಿಡಿಯಾಗಿ ಬರೆಯುವರು. ಯಾವು–

ದರಲ್ಲೂ ಹೆದರಿಕೆ ಹೆಚ್ಚು. ಇದರಿಂದ ಉನ್ನತ ಪದವಿ ಕನಸಾಗಿರುತ್ತದೆ. ಆದರೆ, ವ್ಯವಸಾಯ, ಪಶುಪಾಲನೆ, ಸಾಮಾನ್ಯ ವ್ಯಾಪಾರ ಹಾಗು ಸಾಮಾನ್ಯ ನೌಕರಿಗಳಿಂದ ಮುಂದುವರಿಯುವರು.

ಈ ಜನ, ಪತ್ನಿಗಾಗಲಿ, ಮಕ್ಕಳಿಗಾಗಲಿ ಸಣ್ಣಪುಟ್ಟ ತೊಂದರೆಗಳು ಉಂಟಾದರೂ ಬಹಳ ಚಿಂತೆಪಡುವರು. ನಾನಾ ದೇವರುಗಳಿಗೆ ಹರಕೆ ಮಾಡಿಕೊಳ್ಳುವರು. ಸಾಲಗಳು ಬಗೆಹರಿಯುವುದೇ ಕಷ್ಟ. ಶ್ರಮ ಜಾಸ್ತಿ. ಸುಖ ಅತ್ಯಲ್ಪ. ಆತರೂ ನಿತ್ಯ ಸಂಸಾರಿಗಳು. ಸಂತತಿಗಳಿಂದ ಸುಖವು ಲಭಿಸುತ್ತದೆ. ವಯಸ್ಸು ೩೨, ೩೮ ರಿಂದ ಶುಭಕಾಲ. ೪೫ ರಿಂದ ಮಹತ್ತರ ಭಾಗ್ಯ, ಕೀರ್ತಿ. ಇವರುಗಳಿಗೆ ಕುಜ, ರಾಹುಗಳಿಂದ ಅಶಾಂತಿ ಉಂಟಾಗುತ್ತದೆ.

ಎಚ್ಚರಿಕೆ — ಇವರುಗಳು ತಾವು ತಿಳಿದಿರುವ ವಿಷಯವೇ ಹೆಚ್ಚಿನದೆಂಬ ಮನೋಭಾವವನ್ನು ಕಲ್ಪಿಸಿಕೊಳ್ಳುವುದನ್ನು ಬಿಡಬೇಕು. ಧೈರ್ಯದಿಂದ ವಿಚಾರವಿನಿಮಯ ಮಾಡಬೇಕು. ಧೂಮಪಾನಾದಿಗಳನ್ನು ಆದಷ್ಟು ಕಡಿಮೆ ಮಾಡಬೇಕು. ದೇಹಕ್ಕೆ ಹೆಚ್ಚು ಉಷ್ಣವಾಗದಂತೆ ನೋಡಿಕೊಳ್ಳಬೇಕು.

ಚಿತ್ರ (F) ಸರ್ವರಲ್ಲಿಯೂ ಹೊಂದಿಕೊಂಡು ಹೋಗುವ ಗುಣ. (೭) ಮುನ್ನುಗ್ಗುವ ಸಾಹಸ. ( ೭ ರಿಂದ ೮ ರ ವರೆಗಿನ ಭಾಗ ) ಆದೂ ತಪ್ಪು-ಒಪ್ಪುಗಳನ್ನು ಅನುಸರಿಸಿ ಕಾರ್ಯದಲ್ಲಿ ಮುನ್ನುಗ್ಗುವಿಕೆ. ಎಂತಹ ಸಾಹಸ ಕಾರ್ಯದಲ್ಲಿ ತೊಡಗಿದರೂ, ಎಷ್ಟೇ ಕಷ್ಟ ಬಂದರೂ ಸಹ ಸಾಮ, ದಾನ, ಭೇದ, ದಂಡಗಳೆಂಬ ಚತುರೋಪಾಯದಿಂದ ಜಯಶೀಲರಾಗುವರು. ಕಲಾನಿಪುಣರು. ಪಾದರಸದಂತಹ ಬುದ್ಧಿ. ಎಲ್ಲ ವಿದ್ಯೆಗಳನ್ನು ಅಲ್ಪಸ್ವಲ್ಪ ತಿಳಿದವರು, ತರ್ಕನಿಪುಣರು. ಗುರು-ಹಿರಿಯರಲ್ಲಿ ಭಕ್ತಿಯುಳ್ಳವರು. ಸ್ವಲ್ಪಮಟ್ಟಿನ ಅಂತರ್ಜ್ಞಾನಶಕ್ತಿಯುಳ್ಳವರು; ಸಂಚಾರಪ್ರಿಯರು. ಸಾಮಾನ್ಯವಾಗಿ ಹಣವಿಲ್ಲದೆ ಇರುವುದೇ ಇಲ್ಲ; ಆದರೆ ದುಂದುಗಾರಿಕೆ ಅತಿ. ಪರೋಪಕಾರಿಗಳೂ, ಕೀರ್ತಿಗೆ ಶ್ರಮಿಸುವವರೂ ಆಗಿರುತ್ತಾರೆ. ಪರರನ್ನು ಆಕರ್ಷಿಸುವ ಶಕ್ತಿಯುಂಟು. ಹುಟ್ಟಿದ ಮನೆಯಲ್ಲಿ ನಿಲ್ಲಲಾರರು. ಪರಸ್ಥಳದಲ್ಲಿ ಇವರ ಭಾಗ್ಯವೃದ್ಧಿ. ೨೫ ರಿಂದ ೨೭ನೆಯ ವಯಸ್ಸಿನೊಳಗೆ

ಭಾಗ್ಯಕಾಲ ಆರಂಭ. ಇವರುಗಳಿಗೆ ಬುಧ, ಶುಕ್ರ ಗ್ರಹಗಳು ಶುಭಫಲ ಕೊಡುವವರಾಗಿರುತ್ತಾರೆ.

## ಅಂಗುಷ್ಠ ಮುದ್ರೆಯ ಶಂಖ, ಚಕ್ರದ ಆಕಾರವರ್ಣನೆ

### ಹೆಬ್ಬೆರಳ ಶಂಖ-ಚಕ್ರಾಕಾರ :

೧. ಸುರುಳಿಗಳ (ಸುತ್ತುಗಳ) ಮಧ್ಯಬಿಂದುಭಾಗ ಅಥವಾ ಕೇಂದ್ರ ಬಾಗು [NUCLEUS].

೨. ಕೇಂದ್ರವನ್ನು ಸುತ್ತಿರುವ ವೃತ್ತ [CIRCUMFERENCE].

೩. ಭೂಮಿಯ ಮೇಲ್ಭಾಗದಲ್ಲಿ ಓರೆಯಾಗಿ ಮಲಗಿರುವ (ಮಲಗಿದಂತಿರುವ) ಶಂಖದಾಕಾರವಾದ ಅರ್ಧವೃತ್ತ ( ಕಮಾನಿನಂತೆ, ಶಂಖದಂತೆ ಇರುವ) ರೇಖೆ [SEMICIRCLE].

೪. [SKY Sign] ಸುರುಳಿ ರೇಖೆಗಳು ಅಥವಾ ಆವರ್ತ ರೇಖೆಗಳು, ಆಕಾಶಭಾವದಂತೆ ಬಾಗಿವೆ.

೫. ಕೇಂದ್ರದ ಹೊರದಾರಿ.

೬. ವೃತ್ತದ ಮೇರೆ ಎನ್ನು ಕಾಣುವ ಭೂಮಿಯ [ EARTH Sign ] ಚಿಹ್ನೆ. ಈ ಚಿಹ್ನೆಯು ಮೀನ, ಮೇಷ ಲಗ್ನಗಳಲ್ಲಿ ಹೆಚ್ಚಾಗಿ ಕಾಣಬರುವುದು. ವೃಶ್ಚಿಕ, ಕುಂಭದಲ್ಲಿ ಅಲ್ಪ ಕಾಣುವುದು.

೭. ಭೂಮಿಯ ಎತ್ತರದ ಭಾಗ (ಗುಡ್ಡ, ದಿಣ್ಣೆ).

೮. ಭೂಮಿಯ ಪದರ ರೇಖೆಗಳು.

[ವಿ. ಸೂ :— ೯೫ನೆಯ ಅಂಗುಷ್ಠ ಮುದ್ರೆಯಲ್ಲಿ DE ಗೋದಿ ರೇಖೆ (ಅನ್ನರೇಖೆ)ಗೆ ವಯಸ್ಸನ್ನು ನಿರ್ಧರಿಸುವ ವಿಧಾನವನ್ನು ಸೂಚಿಸಿರುವುದು. ಅದನ್ನು ಅನುಸರಿಸುವುದು ಅತ್ಯವಶ್ಯ].

**ದ್ವಾದಶ ಲಗ್ನದ ಆಕಾರಗಳ ವರ್ಣನೆ :**

CH I. CH. CH III ಈ ಚಿತ್ರಗಳು ದ್ವಾದಶ ಲಗ್ನದ ವಿವಿಧಾಕಾರಗಳನ್ನು ಸೂಚಿಸುತ್ತವೆ. ಈ ಚಿತ್ರಗಳಲ್ಲಿ ಮೇಷಲಗ್ನವ ಕ್ರಮಸಂಖ್ಯೆ ೦ಯಿಂದ ಸುರುವು ವಾಡಿರುತ್ತೇವೆ. ೦ ಸಂಖ್ಯೆಯಿಂದ ೧೧ರ ವರೆಗೆ ಮೇಷಾದಿಯಾಗಿ ಮೀನದ ವರೆಗೆ ಇರುವ ೧೨ ರಾಶಿ ಸಂಖ್ಯೆಗಳು ಎಂದು ತಿಳಿಯುವುದು.

ಪ್ರಾಯೋಗಿಕವಾಗಿ ವಿವರಿಸುವ ಕಾಲದಲ್ಲಿ ಅಂಗುಷ್ಠದ ಪಕ್ಕದಲ್ಲಿ ೦, ೧, ೨ ಹೀಗೆ ೧೧ ರ ವರೆಗೆ ಸಂಖ್ಯೆಗಳನ್ನು ಬರೆದು, ಅವಕ್ಕೆ ವರ್ತುಲ (ಕಾಂಡ)ವನ್ನು ಹಾಕಿರುತ್ತೇವೆ. ಇದು ಲಗ್ನ ಸಂಖ್ಯೆಯನ್ನು ತಿಳಿಸುವುದು.

[ ವಿ. ಸೂ :— ಇಲ್ಲಿ ತೋರಿಸಿರುವ ಮತ್ತು ವರ್ಣಿತವಾಗಿರುವ ವಿಷಯಗಳನ್ನು ಚೆನ್ನಾಗಿ ಮನನ ಮಾಡಿಕೊಂಡು, ನಂತರ ಪ್ರಾಯೋಗಿಕ ಹಾಗು ಅಂಗುಷ್ಠ ಮುದ್ರೆಗಳನ್ನು ಪರೀಕ್ಷಿಸಿರಿ. ಅತ್ಯಂತ ತಾಳ್ಮೆಯು ವಿವೇಚನೆಯೂ ಅವಶ್ಯ].

ಪ್ರತಿ ಲಗ್ನವು ವಿವಿಧವಾದ ಆಕಾರವನ್ನು ಹೊಂದಿರುವುದು. ಅಂದರೆ ಆದಿ, ಮಧ್ಯ, ಅಂತ್ಯ ಲಗ್ನಗಳು ಎಂದು ಮೂರು ಆಕೃತಿಗಳು ಎಲ್ಲಾ ಲಗ್ನದಲ್ಲಿಯೂ ಕಾಣುವುವು.

ಉದಾ:—ಒಬ್ಬ ವ್ಯಕ್ತಿಯು ಮೇಷಲಗ್ನದ (ಸೊನ್ನೆಯ ಒಳಗೆ ಸೊನ್ನೆ ಇದ್ದ ಗುರುತು ಮೇಷಲಗ್ನದ ಸಂಕೇತ ) ಸುರುವಿನಲ್ಲಿ ಹುಟ್ಟಿದ್ದರೆ, ಆ ವ್ಯಕ್ತಿಯ ಅಂಗುಷ್ಠದಲ್ಲಿ ಮೀನಲಗ್ನದ ಆಕಾರವು ಸ್ವಲ್ಪ ಭಾಗದಲ್ಲಿ ಕಾಣು-ವುದು. ಕಾರಣವೆಂದರೆ ಆಗ ತಾನೆ ಮೀನಲಗ್ನ ಮುಗಿದು ಮೇಷ ಸುರು-ವಾಗಿರುತ್ತದೆ.

ಉದಾ :— CH. I (೦) ಚಿತ್ರದಲ್ಲಿ A ಗುರುತಿನ ಚಿತ್ರ ವೀಕ್ಷಿಸಿ. ಇದರಲ್ಲಿ ಮಧ್ಯ (ಕೇಂದ್ರ) ದಲ್ಲಿ ಅಲ್ಪ ಸುರುಳಿ ಆಕಾರ, ಎಡಬಲ ಭಾಗದಿಂದ ಹೊರಟ ರೇಖೆಗಳಿಂದ ಮೂರ್ತಿಗೊಂಡಿರುವುದು. ಮೇಲ್ಭಾಗ ಕೆಳಭಾಗದಲ್ಲಿ ಭೂಶಿರ, ಪವರ್ವತ ಆಕಾರವು ಕಾಣುವುದು. ಇದೇ B ಚಿತ್ರ ವೀಕ್ಷಿಸಿದಾಗ ಕೇಂದ್ರದಲ್ಲಿ ಚಿನುಟದ ಆಕಾರ, ಇದು ಮೇಷಲಗ್ನದ ಮಧ್ಯಮ ಎಂದು ತಿಳಿಯುವುದು. C ಚಿತ್ರದಲ್ಲಿ ಆವರ್ತ ರೇಖೆಗಳು ಮೇಲೇಳುತ್ತಿರುವುವು. ಇದರಿಂದ ಮೇಷಲಗ್ನದ ಅಂತ್ಯವೆಂದು ತಿಳಿಯುವುದು.

D ವೃಷಭಲಗ್ನ (ಕ್ರಮಸಂಖ್ಯೆ ೧) ಈ ಲಗ್ನದ ಆಕಾರ ವೃಷಭದ ಹೆಗಲ ಮೇಲಿನ ಮಾಂಸದ ಗುಪ್ಪೆಯ ಆಕಾರ. E ಇದು ವೃಷಭಲಗ್ನದ ಗುರುತು; ಆದರೆ ಸುಳಿಯಿಂದ ಹೊರಹೊರಟಿರುವ ರೇಖೆಗಳು ಇಜ್ಜೋಡಿ ಯಾಗಿ ಹೊರಡುತ್ತಿರುವುದು. ಇದರಿಂದ ವೃಷಭಲಗ್ನದ ಅಂತ್ಯವೆಂದು ತಿಳಿ ಸುವುದು.

| | ರಾಶಿಗಳು | ಸಂಜ್ಞೆ | | ರಾಶಿಗಳು | ಸಂಜ್ಞೆ |
|---|---|---|---|---|---|
| ೧ | ಮೇಷ | ♈ | ೭ | ತುಲಾ | ♎ |
| ೨ | ವೃಷಭ | ♉ | ೮ | ವೃಶ್ಚಿಕ | ♏ |
| ೩ | ಮಿಥುನ | ♊ | ೯ | ಧನು | ♐ |
| ೪ | ಕರ್ಕ | ♋ | ೧೦ | ಮಕರ | ♑ |
| ೫ | ಸಿಂಹ | ♌ | ೧೧ | ಕುಂಭ | ♒ |
| ೬ | ಕನ್ಯಾ | ♍ | ೧೨ | ಮೀನ | ♓ |

F, G, H ಮಿಥುನಲಗ್ನದ (ಕ್ರಮಸಂಖ್ಯೆ ೨) ಆಕೃತಿ ಕರ್ಕಾಟಕ ಲಗ್ನದ ಚಿತ್ರ ೯. (ಲಗ್ನ ಸಂಖ್ಯೆ ೩) ಈ ಲಗ್ನದ ಆಕಾರ ಚಂದ್ರನಂತೆ ದುಂಡಾಗಿರುವುದು ಹಾಗು ಅರ್ಧಚಂದ್ರ $\frac{3}{4}$ ಭಾಗ ಚಂದ್ರನ ಆಕಾರಗಳು ಇರುವುದು ೯ J. ಈ ಎರಡು ಗುರುತುಗಳು ಕರ್ಕಾಟಕ ಲಗ್ನದ ಸಂಕೇತವಾಗಿರುವುದು.

ಸಿಂಹಲಗ್ನ (ಲಗ್ನ ಸಂಖ್ಯೆ ೪) ಈ ಲಗ್ನದ ಆಕಾರವು ಸಿಂಹದ ಮುಖದ ಆಕೃತಿಯನ್ನು ಹೋಲುವುದು. K, L, M, N ಈ ನಾಲ್ಕು ಆಕಾರಗಳು ಮೇಲಿನ ಲಗ್ನದ ಆಕೃತಿಗಳು.

ಚಿತ್ರ CH II ಕನ್ಯಾಲಗ್ನ (ಸಂಖ್ಯೆ ೫) ಕನ್ಯೆಯು ಬಾಚಿರುವ ತಲೆಯ ಆಕಾರವನ್ನು ಹೋಲುವುದು. P, Q, G ಈ ಚಿತ್ರಗಳ ಆಕೃತಿಯು ಕನ್ಯಾ-ಲಗ್ನಗಳು.

ತುಲಾಲಗ್ನವು ತ್ರಾಸಿನ (ತಕ್ಕಡಿಯ ತಟ್ಟೆ) ತಟ್ಟೆಯ ಆಕೃತಿಯನ್ನು ಹೋಲುವುದು. (ಈ ಲಗ್ನದ ಕ್ರಮಸಂಖ್ಯೆ ೬) R ಮತ್ತು S ಗುರುತಿನ ಚಿತ್ರವು ಮೇಲ್ಕಂಡ ಲಗ್ನದ ಆಕಾರಗಳು.

ವೃಶ್ಚಿಕಲಗ್ನದ (ಕ್ರಮಸಂಖ್ಯೆ ೭) ಆಕಾರವು ಚೇಳಿನ ಉದರ ಮತ್ತು ಭೂಪದರಾಕೃತಿಗಳನ್ನು ಹೆಚ್ಚಾಗಿ ಹೋಲುವುದು. U, V, T ಆಕೃತಿಗಳನ್ನು ವೀಕ್ಷಿಸಿ.

CH III ಧನುರ್ಲಗ್ನದ (ಕ್ರಮಸಂಖ್ಯೆ ೮) ಆಕಾರವು ಧನುಸ್ಸಿನ ಆಕಾರವನ್ನೇ ಹೊಂದಿರುವುದು. W, X ಚಿತ್ರದಲ್ಲಿರುವ ಆಕಾರ.

ಮಕರಲಗ್ನ ( ಕ್ರಮಸಂಖ್ಯೆ ೯ ) ಅಲ್ಪ ತ್ರಿಕೋಣಾಕಾರವನ್ನು ಹೋಲುವುದು. ಚಿತ್ರ Y, Z ವೀಕ್ಷಿಸಿ.

ಕುಂಭಲಗ್ನ (ಕ್ರಮಸಂಖ್ಯೆ ೧೦) ಕುಂಭವೆಂದರೆ ಮಡಕೆಯ ( ಗಡಿ-ಗೆಯ) ಆಕಾರ ಹೋಲುವಿಕೆ ಎಂದು ತಿಳಿಯಲ್ಪಡುವುದು. ೧೦B, ೧೦C, ೧೦ A ಈ ಮೂರು ಆಕೃತಿಗಳನ್ನು ವೀಕ್ಷಿಸಿ.

ಮೀನಲಗ್ನದ (ಕ್ರಮಸಂಖ್ಯೆ ೧೧) ಆಕಾರ ಮೀನಿನ ಗುರುತು, ಆಕೃತಿಯನ್ನು ಹೋಲುವುದು. ೧೧D ಎರಡು ಮೀನಿನ ಮಿಲನ, ೧೧E ಒಂದು ಮೀನಾಕೃತಿ ೧೧F ಮೀನಿನ ಕಣ್ಣು, ಬಾಯಿಯು ಆಕಾರ ಅಂದರೆ

ಈ ಲಗ್ನವು ಮುಗಿಯುತ್ತಾ ಇದೆ. ಇದರಿಂದ ತಲೆಯ ಮೇಲೆ (CCF ಚಕ್ರದಲ್ಲಿ) ಭೂಪದರಗಳು ಕಾಣುತ್ತಿರುವುವು ಆದರೆ ಮುಂದೆ ಮೇಷ ಲಗ್ನದ ಪ್ರಾರಂಭ ಎಂದು ತಿಳಿಯುವುದು.

ದ್ವಾದಶಲಗ್ನಗಳ ಪ್ರಾಯೋಗಿಕ ವಿಭಾಗ :

**ಮೇಷಲಗ್ನ:—ಮೇಷ ಎಂದರೆ [RAM] ಟಗರಿನ ಸಂಕೇತ ಸೂಚಕ.** ಈ ಲಗ್ನಕ್ಕೆ ಅಂಗಾರಕ [MARS] ನು ಅಧಿಪತಿಯು. ಈತನು ಭೂಗರ್ಭದಿಂದ ಬಂದವನು ಎಂದು ಭಾರತೀಯ ಶಾಸ್ತ್ರಾಧಾರ.

ಅಂಗುಷ್ಠದಲ್ಲಿ ಟಗರಿನ ಆಕಾರವು ಪೂರ್ಣವಾಗಿ ಕಾಣದಿದ್ದರೂ ಸಹ, ಟಗರಿನ ಕೊಂಬುಗಳು ಅದರ ಕಿವಿಯ ಬಳಿ ಸುತ್ತಿಕೊಂಡಿರುವಂತೆ ಆಕಾರ, ಅಥವಾ ಟಗರಿನ ಕೊಂಬುಗಳು ಭುಜದ ಮೇಲೆ ಮಲಗಿದ ಆಕಾರ, ಭೂಪದರಗಳ ಮೇಲೆ ಮಲಗಿಸಿ ಇಟ್ಟಿರುವಂತಹ ಇಕ್ಕಳ [FORCEPS]ದ ಆಕಾರ ಕಾಣುವುದು.

ಈ ಮೇಷಲಗ್ನದಲ್ಲಿ ಹುಟ್ಟಿರುವವರ ಹೆಬ್ಬೆರಳಿನಲ್ಲಿ ಶಂಖಚಕ್ರದ ಆಕೃತಿಯ ಮೇಲ್ಭಾಗ ಕೆಳಭಾಗಗಳಲ್ಲಿ Fig No. RG1 ರಲ್ಲಿ ಒನಯ ಗುರುತಿನಂತಹ ಭೂಪದರ ಗುರುತು ಅತಿಯಾಗಿ ರೂಪಿತವಾಗಿರುವುದು. ಮತ್ತೆ ಕೆಲವು ಅಂಗುಷ್ಠದಲ್ಲಿ ಹೋತವು ತಲೆಯನ್ನು ಹೊಟ್ಟೆಯ ಕಡೆಗೆ ವಾಲಿಸಿಕೊಂಡು ಮಲಗಿರುವ ಆಕಾರ ಕಾಣುವುದು.

[ಭೂಮಿಯ ಮೇಲಿಟ್ಟಿರುವ ಇಕ್ಕಳದ ಗುರುತು ಮತ್ತು ಹೆಚ್ಚಾದ ಭೂಪದರಗಳು ಇರುವುದೇ ಈ ಲಗ್ನದ ಸಂಕೇತ].

ಮೇಲೆ ವಿವರಿಸಿರುವಂತಹ ಆಕಾರವು ಕಾಣಬರುವುದಲ್ಲದೆ ಉಗುರುಗಳು ಸುಂದರವಾಗಿರುವುದಿಲ್ಲ. ವ್ಯಕ್ತಿಗಳು ಎತ್ತರವಾಗಿಯೂ, ದಪ್ಪವುಳ್ಳವರಾಗಿಯೂ ಇರುವರು ಇಂತಹ ವ್ಯಕ್ತಿಗಳಿಗೆ ಬುದ್ಧಿ ಚಂಚಲ, ಆಡಿದ ಮಾತನ್ನು ತಕ್ಷಣ ಬದಲಾಯಿಸಿಕೊಳ್ಳುವುದು, ತನ್ನ ತಪ್ಪನ್ನು ಅರ್ಥ ಮಾಡಿಕೊಳ್ಳದೆ ಜಗಳವಾಡುವುದು, ಕೆಲವುಬಾರಿ ತಪ್ಪೋ, ಸರಿಯೋ ಮೊಂಡು ಹಟ ಮಾಡುವುದು, ಪರರ ಮಾತಿಗೆ ಕಿವಿಕೊಡುವುದು — ಈ ತರಹದ ಗುಣಗಳು ಇರುವುವು. ಬಾಯಿ ಅಗಲವಾಗಿರುವುದು, ಮತ್ತು ಮಾತು ಅತಿಯಾಗಿ ಆಡುವರು. ಇವರುಗಳು ಕಷ್ಟಪಟ್ಟು ಕೆಲಸ ಮಾಡಿದರೂ ತಕ್ಕ

ಪ್ರತಿಫಲ ದೊರೆಯುವುದಿಲ್ಲ. ಸಂಸಾರಸುಖ ಕಡಿಮೆ, ಸೋದವರಿಗೆ ಇವರು-ಗಳು ಸಹಾಯ ಮಾಡುವರು. ಆಯುಧಗಳಿಂದ ಅಥವಾ ಪಿತ್ತ ಮತ್ತು ಉಷ್ಣಗಳಿಂದ ಆಗಾಗ್ಗ ತಲೆನೋವು, ಅಂಗಾಂಗಳ ಬೇನೆ (ನೋವು) ಇರು-ತ್ತದೆ. ಗಣಿತ, ತಾಂತ್ರಿಕ, ವ್ಯವಸಾಯ, ಸೈನಿಕ ಶಾಖೆಗಳಲ್ಲಿ ಅಭಿವೃದ್ಧಿ. ಬಾಲ್ಯದಲ್ಲಿಯೇ ವಿಶೇಷ ತೊಂದರೆಗಳು ಬರುವುದರಿಂದ ಅಲ್ಪವಿದ್ಯಾವಂತ-ರಾಗಿರುವರು.

ಈ ಲಗ್ನದವರಿಗೆ ಶನಿ, ಶುಕ್ರ, ಬುಧರು ಪಾಪಿಗಳು, ಗುರು, ರವಿ, ಶುಭಫಲದಾಯಕರು. ಆದರೆ ಶನಿ, ಬುಧ ಬೆರಳುಗಳಲ್ಲಿರುವಷ್ಟು ಕಾಲ (ಒಂದೊಂದು ಬೆರಳಲ್ಲಿ ೩ ಅಂತರಗಳಿವೆ. ಒಂದು ಅಂತರಕ್ಕೂ ಇನ್ನೊಂದು




ವೃಷಭಲಗ್ನ (೧೬೦-೧೬೩)



ಕರಾರೇಖೆಗಳು (೧೭೦-೧೭೩-LT-RT)

ಅಂತರಕ್ಕೂ ಬೇರೆ ಬೇರೆ ಮಾಡುವ ರೇಖೆಗಳು) ರೇಖೆಗಳು ಯಾವಾಕಾರ ವಾಗಿದ್ದು, ಆ ಯವಾಕಾರಗಳು ಸುಂದರವಾಗಿ ಮಧ್ಯಮ ದಪ್ಪವಾಗಿ ಕಂಡ ಪಕ್ಷದಲ್ಲಿ ಅಥವಾ ಬೆರಳುಗಳಲ್ಲಿ ನೀಟಾದ, ಉದ್ದವಾದ ಗೆರೆಗಳೇ ಅತಿ ಯಾಗಿದ್ದುದಾದರೆ ಮೇಲೆ ಹೇಳಿದ ಪಾಪಗ್ರಹಗಳಷ್ಟೇ ಈ ಲಗ್ನಕ್ಕೆ ಕೆಟ್ಟವ ರಾದರೂ ಶುಭಫಲ. ಕೀರ್ತಿ, ಐಶ್ವರ್ಯ, ಸಂಸಾರಸುಖಗಳೆಲ್ಲಾ ಬಾಲ್ಯ ಅಥವಾ ೨೧, ೨೪ನೆಯ ವಯಸ್ಸಿನಲ್ಲಿಯೇ ಸುರುವಾಗುವುದು.

ಮೇಲೆ ಹೇಳಿದ ಬೆರಳುಗಳಲ್ಲಿ ಅತಿ ದಪ್ಪವಾದ ಅಡ್ಡಗೆರೆಗಳಿದ್ದು, ಬೆರಳುಗಳು ಸೊಟ್ಟಗಿದ್ದು, ಹೆಬ್ಬೆರಳಿನ ಗೋಧಿರೇಖೆ, ಅನ್ನರೇಖೆ ಮರದ ಕುಂಬಿನಂತೆ ಒಡೆದಿದ್ದುದಾದರೆ ಅಥವಾ ಭಿನ್ನ ಭಿನ್ನವಾದ ಅನ್ನರೇಖೆ ಇದ್ದರೆ ಕೋಪ, ಜಗಳ, ಅಶಾಂತಿ, ರೋಗ, ಶತ್ರುತ್ವ, ಕಷ್ಟಾರ್ಜಿತದಿಂದ, ಸ್ವೇಚ್ಛಾವೃತ್ತಿಯಿಂದ ಜೀವನಸಂಸಾರಸುಖ ಅತಿ ಕಡಿಮೆಯಾಗುತ್ತದೆ. ಜೀವನದಾದ್ಯಂತವೂ ಶೋಕದಿಂದ ಕೊನೆಗೊಳ್ಳುವುದು.

ಈ ಲಗ್ನದಲ್ಲಿ ಜನಿಸಿದ ವ್ಯಕ್ತಿಗಳ ಕೈಯಲ್ಲಿ ಭಾಗ್ಯರೇಖೆ ಹಾವಿ- ನಾಕಾರವಾಗಿದ್ದರೆ ದ್ರವ್ಯಕೊರತೆ, ಸಂಸಾರಜೀವನ ವಿರಸದಿಂದ ಕೂಡಿರು ತ್ತದೆ. ಕಫ, ಪಿತ್ತರೋಗಗಳು ಅತಿಯಾಗಿರುವುದು. ಅಂಗುಷ್ಠದಲ್ಲಿ ಶಾದ್ವ ಚಕ್ರ, ಕಳಸ, ಶಂಖಾಕಾರಾಕೃತಿ ಇದ್ದು ಅವುಗಳ ಮೇಲೆ ಅಶುಭ ಚಿಹ್ನೆಗಳಿಲ್ಲ- ದಿದ್ದರೂ ಸಹ ಮಧ್ಯಮ ಸುಖವಿರುವುದು

(R. Thumb print Ist one) ಈ ನಾಲ್ಕು ಮೇಷಲಗ್ನದಲ್ಲಿ ಜನಿಸಿದವರ ಹೆಬ್ಬೆರಳ ಮುದ್ರೆಯಲ್ಲಿ ಮೊದಲನೆಯ ಮುದ್ರೆಯಲ್ಲಿ ಶಿರಭಾಗ ಮತ್ತು ಭೂಭಾಗ ಅತಿಯಾಗಿರೂ ಮಧ್ಯದಲ್ಲಿ ಸ್ವಲ್ಪ ಸುರುಳಿ ಇರುವುದರಿಂದ ಮೇಷಲಗ್ನದ ಉದಯದಲ್ಲಿ ಜನಿಸಿದ ವ್ಯಕ್ತಿಯೆಂದು ಅರ್ಥವಾಗುವುದು.

ಶಂಖಾಕೃತಿಯಾಗಿ ತೋರ್ಪಡುವ ಪದರುಗಳು ಭಿನ್ನವಾಗದೆ ಅದಷ್ಟು ಸುಂದರವಾದ ಅರ್ಧವೃತ್ತಗಳು ಇರುವುದರಿಂದ ಲಗ್ನಕ್ಕೆ ಶುಭಗ್ರಹಗಳ ದೃಷ್ಟಿಯೂ ಇರುವುದು ಮತ್ತು ಯವ (ಗೋಧಿರೇಖೆ) ರೇಖೆಯೂ ಪೂರ್ಣ ಯವಾಕಾರವಿಲ್ಲದೆ ಹೋಳೆಯೂ ಎರಡು ರೇಖೆಗಳು ಇರುವುದರಿಂದ ವ್ಯಕ್ತಿಯೂ ಮಧ್ಯಮಸುಖಿಯೂ, ಧನಿಕನೂ, ಸಂತತಿ ಸಂಸಾರಾದಿಗಳನ್ನು ಹೊಂದಿರು- ವವನೂ ಆಗಿರುವನು. ಈ ರೇಖೆಯು ಕೊನೆಮೊದಲಲ್ಲಿ ಚಿಸಿರೊಡೆಯದೇ

ಇರುವುದರಿಂದ ಮತ್ತು ಒಂದು ರೇಖೆಯು ಇನ್ನೊಂದು ರೇಖೆಗೆ ಸಹಾಯ ಮಾಡುವಂತೆ ಸಮೀಪ ಹೊಂದಿರುವುದರಿಂದ ವ್ಯಕ್ತಿಗೆ ಭ್ರಾತೃಪೋಷಕರುಗಳು. ನಿರ್ದಿಷ್ಟ ವೃತ್ತಿ ಇರುವುದು. ಬಾಲ್ಯದಿಂದ ಅಂತ್ಯದ ವರೆಗೆ ಸುಖಿಯಾಗಿ ಜೀವಿಸುವನು.

ಮೇಲಿನ ೨ನೆಯ ಮೇಷಲಗ್ನದ ಚಿತ್ರದಲ್ಲಿ ಭೂಭಾಗವು ಮತ್ತು ಆಕಾಶ (Sky) ಭಾಗವು ವಿಶೇಷವಾಗಿರುವುದು. ಮಧ್ಯದಲ್ಲಿ ಸುಗುಳಿಯ ಗುರುತುಗಳಿಲ್ಲ ಹಾಗೂ ಹೋತ ಮಲಗಿರುವಾಗ ಅದರ ಕೊಂಬು ಶಿರದಿಂದ ಕೆಳಭಾಗದ ಕಡೆಗೆ ಸಾಗಿದಂತೆ ಇರುವುದು. (ಯಾವ ರೇಖೆಯಿಂದ ಮೇಲ್ಪಡಿಯ ವರೆಗೆ ಪದರ ಪದರದಂತೆ ಕಾಣುವುದು).

ಈ ರೀತಿ ಪದರವು ಭಿನ್ನವಾಗದೆ ಒಂದಕ್ಕೊಂದು ಸೇರುವುದರಿಂದ ವ್ಯಕ್ತಿಯು ಬಾಲ್ಯದಿಂದಲೂ ಸುಖಿಯೂ, ಕೀರ್ತಿ, ಐಶ್ವರ್ಯಯುತ ಮನೆತನದವರೂ ಆಗಿರುತ್ತಾರೆ. ಅಲ್ಪಸ್ವಲ್ಪ ನೋದರೆ, ಸ್ಥಳಸಂಚಾರ-೨೬, ೨೭ನೆಯ ವಯಸ್ಸಿನ ವರೆಗೆ. ೨೮ನೆಯ ವಯಸ್ಸಿನಿಂದ ಸಂಸಾರವೃತ್ತಿ ಲಭಿಸಿ ೭೦ನೆಯ ವಯಸ್ಸಿನ ವರೆಗೆ ಸುಖಿಸುವರು.

೩ನೆಯ ಚಿತ್ರದಲ್ಲಿ ಮಲಗಿದ್ದ ಮಧ್ಯದ ಸುಳಿಭಾಗವು ಅಲ್ಪಸ್ವಲ್ಪ ಮೇಲೆ ಏಳುತ್ತಿರುವಂತೆ ಕಾಣುವುದು. ಇದರಿಂದ ಮೇಷಲಗ್ನವು ಅಂತ್ಯವಾಗುತ್ತಿರುವ ಚಿಹ್ನೆ. ಆದರೆ ಶಿರವು ( ಆಕಾಶಭಾಗ ) ಕೀಟ ತಿಂದಂತೆ ಕಾಣುವುದು. ಇದಲ್ಲದೆ ಅಲ್ಪ ಭಿನ್ನವಾಗಿರುವುದರಿಂದ ಅಲ್ಪಸ್ವಲ್ಪ ಕಷ್ಟ ಕಾಲಗಳು, ರೋಗಾದಿಗಳ ಕಾಟ ಆದರೂ ಭೂಮಿಯ ಕೆಳಗಿರುವ ನೀಟಾದ ಬಿಳಿ ರೇಖೆಯು ವ್ಯಕ್ತಿಯ ಜೀವನವು ಸಮಾಜಕ್ಕೆ ಹೊಂದಿಕೊಂಡು ಹೋಗುವುದು ಮತ್ತು ಮಧ್ಯಮ ಸುಖಿಯಾಗಿ ಬಾಳಲು ಸಹಕರಿಸುವುದು

೪ನೆಯ ಚಕ್ರವು ಪೂರ್ಣ ಮೇಷಲಗ್ನವಾಗಿದೆ. ಆದರೆ ಸುಳಿಭಾಗಕ್ಕೆ ಹೊರಗಿನಿಂದ ಬಿಳಿಯ ರೇಖೆ ನುಗ್ಗಿ ಭೇದಿಸಿರುವುದು. ಭೂಭಾಗ ಆಕಾಶ ಭಾಗವು ಭಿನ್ನ ಭಿನ್ನವಾಗಿರುವುದು. ಮತ್ತು ಗೋದಿರೇಖೆಯು ದಪ್ಪವಾಗಿರುವದಲ್ಲದೆ ಟಿಸಿಲೊಡೆದಿರುವುದು. ಇದರಿಂದ ವ್ಯಕ್ತಿಯ ಬಾಲ್ಯ ಜೀವನ ಮಹತ್ತರ ಶ್ರಮವುಳ್ಳದ್ದಾಗಿಯೂ, ಕುಟುಂಬದಲ್ಲಿ ಬಡತನವೂ, ಕಷ್ಟದಿಂದ ನ್ಯಾಯ ಸಂಪಾದಿಸುವವನೂ, ಸ್ವಯತ್ನ ಕಾರ್ಯದಿಂದ

ದುಃಖವು ಆಗಾಗ್ಗೆ ಪತ್ನಿ-ಪುತ್ರರಿಂದ ತೊಂದರೆ, ವ್ಯಕ್ತಿಗೆ ಉದರದಲ್ಲಿ ಉಷ್ಣಸಂಬಂಧ ಬೇನೆ, ನರಗಳಲ್ಲಿ ನಿಃಶ್ಯಕ್ತಿಯು ಉಂಟಾಗುವುದು. ಶತ್ರುಗಳು ಅತಿಯಾಗಿರುತ್ತಾರೆ. ಪೂರ್ಣ ಆಯುಷ್ಯವಿರಲಾರದು. ಲಗ್ನಕ್ಕೆ ಕ್ರೂರ ಗ್ರಹಗಳ ದೃಷ್ಟಿಯು ೭, ೨, ೧, ೧೫. ಈ ಭಾಗಗಳು ಅಶುಭವಾಗಿರುತ್ತವೆ.

೫ ನೆಯ ಚಿತ್ರದಲ್ಲಿ ೩ ನೆಯ ಚಿತ್ರದಂತೆ ಮಧ್ಯದಲ್ಲಿರುವ ಸುಳಿಯು ಮೇಲೆದ್ದಿರುವುದು. ಇದರಿಂದ ಮೇಷಲಗ್ನ ಇನ್ನು ಕೇವಲ ಅಲ್ಪಕಾಲ ಉಳಿದಿದೆ ಎಂದು ಪರಿಗಣಿಸಬೇಕು. ೩ ನೆಯ ಚಿತ್ರದ ಜೀವನದ ವರ್ಣನೆಗಿಂತ ಸುಖ-ಶಾಂತಿಯ ಜೀವನ ಸಾಗಿಸುವರು. ದ್ರವ್ಯ, ಕೀರ್ತಿ ವಿಶೇಷ ಲಭಿಸುವುದು. ಎಷ್ಟೇ ಬಂದರೂ ವ್ಯಯ ಜಾಸ್ತಿ. ಮಧ್ಯಮ ವಿದ್ಯೆ, ವಿನಯ ಸಂಪನ್ನರಾಗಿರುತ್ತಾರೆ.

ಚಿತ್ರ ೨೩೩ L. T. ಈ ಚಿತ್ರದಲ್ಲಿ ಎರಡು ಮೀನುಗಳು ಮಿಲನವಾದಂತೆ ಕಾಣುವುದು. ಆದರೆ ಅಂಗುಷ್ಠದ ಶಿರಭಾಗವು ಭೂಚಿಹ್ನೆಯನ್ನು ಹೆಚ್ಚಾಗಿ ಹೊಂದಿರುವುದು. ಮತ್ತು ೪ ರಿಂದ ೯ ರ ವರೆಗೆ ಸಹ ಭೂಮಿ ಪದರವೇ ಕಾಣುವುದು. T ಯಿಂದ H ವರೆಗೆ ಮಾತ್ರ ಮೀನುಗಳ ಸುರುಳಿ ಕಾಣುವುದು. ಇದರಿಂದ ಮೀನಲಗ್ನ ಮುಗಿದು ಮೇಷಲಗ್ನ ಸುರುವು ಎಂದು ತೀರ್ಮಾನಿಸಬೇಕು. (ಮೇಷಲಗ್ನಕ್ಕೆ ಭೂಚಿಹ್ನೆ ಅತಿಯಾಗಿರುವುದು.)

ಸದರ ಪದರಗಳೆಲ್ಲಾ ರಂಧ್ರ ಹೊಂದಿರುವುದರಿಂದ ಲಗ್ನದಲ್ಲಿ ಶತ್ರುಗ್ರಹಗಳ ಸಂಯೋಗ ಮತ್ತು ಲಗ್ನಕ್ಕೆ ಹಿಂದೆ ಮುಂದೆ ಗ್ರಹಗಳಿರುವುವೆಂದು F ಮತ್ತು G ರೇಖೆಗಳು ಲಗ್ನದ ಸುಳಿಯನ್ನು ಭೇದಿಸಿರುವವು. H ರೇಖೆಯು ಸುಳಿಯ ದ್ವಾರವನ್ನು ಭೇದಿಸಿರುವುದು. ಇದರಿಂದ ಜೀವನದಲ್ಲಿ ಸುಖ-ಶಾಂತಿ ಗಳಿಸುವ ಯೋಗವೇ ಕನಸಾಗಿಹೋಯಿತು. ಶುಭಗ್ರಹಗಳೇ ಶತ್ರುಗ್ರಹಗಳ ಸಂಯೋಗದಿಂದ ಜಾತಕದಲ್ಲಿ ಕೂಡಿವೆ. I ದಿಂದ J ವರೆಗೆ ಇರುವ ರೇಖೆ ಯಾವರೇಖೆ (ಗೋದಿರೇಖೆ) ಮೊಂಡಾಗಿರುವುದರಿಂದ, ಅತಿ ದಪ್ಪವಾಗಿರುವುದರಿಂದ ಸುಖಜೀವನ ಇಲ್ಲ.

೨೩೫ R.T. ಇದೇ ಎಡಹೆಬ್ಬೆರಳಿನಲ್ಲಿ A.C. ಬಾಲದಂತಹ ರೇಖೆಯು B ರೇಖೆಯು ಸುರುಳಿಯನ್ನು ಭಂಗಗೊಳಿಸಿದೆ.

## ವೃಷಭಲಗ್ನ [ ಚಿತ್ರ-ಪುಟ : ೧೯ ]

ಮೇಷಲಗ್ನದಲ್ಲಿ ಭೂಮಿಯ ಮೇಲೆ ಮಲಗಿಸಿ ಇಟ್ಟಂತಹ ಇಕ್ಕಳದ (Forceps) ಆಕೃತಿಯು ಸುಳಿ (ಕೇಂದ್ರ ಚಿಹ್ನೆ) ರೇಖೆಗಳು ಮೇಲೆ ಏಳುತ್ತಿರುವಂತೆ ಕಾಣುವುವು. ಹಿಂದಿನ ಲಗ್ನದಲ್ಲಿ ಸುರುಳಿ ಸುತ್ತಿಕೊಂಡಿರುವ ಆಕಾರವು ವೃಷಭಲಗ್ನದಲ್ಲಿ ಎತ್ತಿನ ಹೆಗಲಲ್ಲಿ ( Hump ) ಕಾಣುವುದು. ಮತ್ತು ಮೇಷಲಗ್ನದಲ್ಲಿರುವ ಭೂಪದರ ಚಿಹ್ನೆಗಳು ಈ ಲಗ್ನದಲ್ಲಿ ಕಡಿಮೆಯಾಗುತ್ತ ಬರುವವು.

ಮೇಲೆ ವಿವರಿಸಿದಂತಹ ವೃಷಭಲಗ್ನದ ಜಾತಕರು ಅಲ್ಪ ದಪ್ಪವಾದ ತುಟಿ, ಅಗಲವಾದ ಹಣೆ, ಸ್ವಲ್ಪ ದಪ್ಪವಾದ ಶರೀರ, ಉಬ್ಬಿದ ದವಡೆ, ಶೀತವಾಯು ಪ್ರಕೃತಿ; ಸುಲಭೋಪಾಯದಲ್ಲಿ ಕುಳಿತಿದ್ದೆಡೆಯಲ್ಲಿ ಸಂಪಾದನೆಯಾಗಬೇಕು. ಸೌಂದರ್ಯಪ್ರಿಯ, ಸ್ತ್ರೀಸುಖ ಹೆಚ್ಚಾಗಿ ಬೇಕು. ಸ್ವಜನರನ್ನು ಕಂಡರೆ ಅವಿಶ್ವಾಸ, ವ್ಯಾಗ್ಯಾಯಾಳಿ, ಪಶು, ಸೇವಕ, ಗೃಹವುಳ್ಳವರಾಗಿರುತ್ತಾರೆ. ಈ ಲಗ್ನಕ್ಕೆ ರವಿ, ಶನಿ ಗ್ರಹಗಳು ಫಲದಾಯಕರು, ಇವರು ಶುಭಕ್ಷೇತ್ರದಲ್ಲಿದ್ದು ಯಾವ ಶತ್ರುಗಳಿಂದೊಡಗೂಡದೆ ಅಥವಾ ದೃಷ್ಟಿಗೊಳಗಾಗದೆ ಇದ್ದಲ್ಲಿ ವಿಶೇಷ ಕೀರ್ತಿ, ಐಶ್ವರ್ಯಪ್ರಾಪ್ತಿಯಾಗುವುದು. ಶನಿಗ್ರಹವಂತೂ ಜನನ ಕಾಲದಲ್ಲಿ ಎಷ್ಟು ಶುಭಸ್ಥಾನದಲ್ಲಿರುವನೋ ಅಷ್ಟು ಶುಭಫಲ ಲಭಿಸುವುದು.

ಶನಿಬೆರಳಿನಲ್ಲಿರುವ ಶಂಖ, ಚಕ್ರ, ಕಳಸಗಳು ಪೂರ್ಣವಿದ್ದು ಅಡ್ಡ ಗೆರೆಗಳು ಈ ಚಿಹ್ನೆಯನ್ನು ಭೇದಿಸಿದ್ದರೆ ಮತ್ತು ಇದೇ ಬೆರಳ ೨, ೩ನೆಯ ಅಂತರಗಳಲ್ಲಿ ಉದ್ದವಾದ ಗೆರೆಗಳು ಸಣ್ಣಗೆ ಇದ್ದರೆ ಈ ಜಾತಕರಿಗೆ ವಿಶೇಷ ಶುಭಫಲವು ಲಭಿಸುವುದು.

ಈ ಬೆರಳ ಅಂತರರೇಖೆಗಳು ಶಂಖ, ಚಕ್ರಗಳು ಟಿಸಿಲೊಡೆದಿದ್ದರೆ ವ್ಯಕ್ತಿಯು ದುರಾಚಾರಿಯಾಗಿಯೂ, ರೋಗಾದಿ ಶತ್ರುಗಳುಳ್ಳವನೂ ಆಗಿರುತ್ತಾನೆ: ಮತ್ತು ಅಶಾಂತಜೀವನವಿರುವುದು.

ಹಿಂದೆ ಮೇಷಲಗ್ನದ ೨. ೪. ೫ನೆಯ ಚಿತ್ರದಲ್ಲಿ ಮಲಗಿದಂತೆ ಇದ್ದ ಇಕ್ಕಳದ (Forceps) (ತಂಡಸ) ಆಕಾರದ ಚಿಹ್ನೆಯ ತಲೆಭಾಗವು ಅಲ್ಪ ಮೇಲೆದ್ದಂತೆ ೬ನೆಯ ಚಿತ್ರದ ೧ನೆಯ ಗುರುತಿನಲ್ಲಿ (ವೃಷಭಲಗ್ನ) ಸುಳಿಯ ಮಧ್ಯಭಾಗವು ಕಾಣುವುದು. ಈ ಲಗ್ನದಲ್ಲಿ ಭೂಮಿ, ಆಕಾಶ ಭಾವವು ಕಡಿಮೆಯಾಗುವುದು.

೧೬೦ ನೆಯ ಚಿತ್ರದ ಮಧ್ಯ ಸುಳಿಯು ಮೇಲೆದ್ದಿರುವುದು ಆದರೂ ಶಿರಭಾಗದಲ್ಲಿ ಅತಿ ಅತಿಯಂತಹ ಪದರಗಳು ಇರುವುವು. A ರೇಖೆಯು ಸರ್ಪಾಕಾರವಾಗಿ ಬಾಯಿಬಿಟ್ಟಿರುವುದು. ಈ ರೇಖೆಯು ಬಾಯಿಬಿಟ್ಟಂತೆ ಇರುವುದರಿಂದ ರಾಹುಗ್ರಹವು ಲಗ್ನದಲ್ಲಿದೆ ಎಂದು ಅರ್ಥವಾಗುವುದು. ಬಿಳಿಯ ಚುಕ್ಕೆಗಳು ಅತಿಯಾಗಿ ಮೂಡಿರುವುವು. ಆದರೂ ಸುರುಳಿರೇಖೆಗಳು ಹೆಚ್ಚು ಒಡೆದಿಲ್ಲದಿರುವುದರಿಂದ ಮಧ್ಯಮ ಸುಖಜೀವನ. ಅಲ್ಪ ವಿದ್ಯಾಲಾಭ ವ್ಯಕ್ತಿಗೆ ಇರುವುದು.

೧೬೧—ವೃಷಭಲಗ್ನದ ಈ ಅಂಗುಷ್ಠದಲ್ಲಿ ಎತ್ತಿನ ಹೆಗಲ ಮೇಲೆ ಇರುವ ಮಾಂಸದ ಮುದ್ದೆಯಂತಿರುವ ಆಕಾರವಿರುವುದು. ಈ ಆಕಾರದ ಮೇಲ್ಭಾಗದಲ್ಲಿ ಸರ್ಪದ ಬಾಲಾಕಾರದ ಗುರುತು. ಭೂಭಾಗವು ವಿಶೇಷ ರಂಧ್ರಾಕಾರವಾಗಿರುವುದು. ಗೋದಿ ರೇಖೆಯು ತುಂಡಾಗಿ ಪ್ರಕಾಶವಿಲ್ಲದಂತಾಗಿವೆ. ಆದರೆ ಮಧ್ಯದ ಸುಳಿಯ ಭಾಗದಲ್ಲಿ ಕೆಲವು ಸುತ್ತುಗಳು ಮಾತ್ರ ಅಲ್ಪ ಸೊಗಸಾಗಿರುವುವು. ಇದರಿಂದ ವ್ಯಕ್ತಿಯು ಮನೆತನದಲ್ಲಿ ಒಂದಕ್ಕಿಂತ ಹೆಚ್ಚು ಪತ್ನಿಯರುಗಳುಳ್ಳವರೂ, ಹೆಚ್ಚು ಬಂಧುಗಳುಳ್ಳವರೂ ಮತ್ತು ಅನಾಯಾಸವಾಗಿ ಅಪಾರ ಐಶ್ವರ್ಯ ಗಳಿಸುವವರೂ ಆಗಿರುವರು. ತಾತನ ಕಾಲದಲ್ಲಿ ವಿಶೇಷ ಐಶ್ವರ್ಯ ಪ್ರಾಪ್ತಿಯಾಗಿ ತಂದೆಯ ಕಾಲದಲ್ಲಿ ದಾಂದುಗಾರಿಕೆ, ರಾಜಯೋಗಸುಖವು. ಈತನು ಬಾಲ್ಯದಲ್ಲಿ ವಿಶೇಷ ಸುಖಪಟ್ಟು ಪ್ರಾಪ್ತವಯಸ್ಸಿನಿಂದ ದಿನದಿನಕ್ಕೆ ಅದೃಷ್ಟ ಮಾಯವಾಗುವುದು. ಇನ್ನು ಈತನ ಯೌವನಕಾಲ ಮತ್ತು ವೃದ್ಧಾಪ್ಯವು ಶ್ರಮದಿಂದ ಸಾಗುವುದು.

ವೃಷಭಲಗ್ನದ ಸಂಕೇತವನ್ನು ಬರೆದಿರುವ ವೃತ್ತದ ಕೆಳಬದಿಯಲ್ಲಿ ಸರ್ಪರೇಖೆ ಇದೆ. ಆ ಸರ್ಪರೇಖೆಯ ಕೆಳಗಿನ ಆವರ್ತರೇಖೆಯು ವ್ಯಕ್ತಿಯ

ಹಿರಿಯರ ಜೀವನವನ್ನು ತಿಳಿಸುವುದು. ಸುಳಿಯು ಈ ವ್ಯಕ್ತಿಯ ಜನ್ಮ ಕಾಲವನ್ನು ಭೂಭಾಗಕ್ಕೂ ಸುರುಳಿಯ ಆವರ್ತಕ್ಕೂ ಮಧ್ಯೆ ಉದ್ದವಾದ ಅಡ್ಡಗೆರೆ ಇರುವುದು. ಸುಳಿಯಿಂದ ಭೂಮಿಯ ಭಾಗದ ವರೆಗೆ ಸ್ವಲ್ಪ ಭಾಗ ಮಾತ್ರ ಶುಭವಿರುವುದು. ಇದರಿಂದ ವ್ಯಕ್ತಿ ಬಾಲ್ಯದಲ್ಲಿ ಸುಖವಾಗಿದ್ದನೆಂದು ವಿಶದಪಡಿಸಿದೆ. ಗೋದಿರೇಖೆಯು ಒಡೆದಿರುವುದರಿಂದ ಮತ್ತು ಸಾರರಹಿತ-ವಾಗಿರುವುದರಿಂದ ಯೌವನದಲ್ಲಿ ಶ್ರಮ.

೧೬೨ ಈ ಲಗ್ನದ ಒಳಗಿನ ಸುಳಿ S ಗುರುತಿನ ಕಡೆಗೆ ಮೇಲಿದ್ದಿರು ವುದು. ಮತ್ತು A ಯಿಂದ B ವರೆಗೆ ಒಂದೇ ರೇಖೆ, ಆದರೆ A ಯಿಂದ C ವರೆಗೆ ಇರುವ ಭಾಗ ಸುಳಿಯಿನಲ್ಲಿ ಒಡೆದಿರುವುದರಿಂದ (Forked) ೧೮ ರಿಂದ ೨೩ನೆಯ ವಯಸ್ಸಿನ ಒಳಗೆ ವ್ಯಕ್ತಿಯ ಪ್ರಯತ್ನ-ಕಾರ್ಯಭಂಗವು. ಪೋಷಕರಿಗ ತೊಂದರೆಗಳು ಇದ್ದಾವು. C ಯಿಂದ B ವರೆಗೆ ಸಮನಾಂತರ ರೇಖೆ ಇರುವುದರಿಂದ ಮಧ್ಯಮ ಸುಖಿ, ಭಾಗ್ಯಜೀವಿಯಾಗಿರುವನು.

೧೬೩—ಒಳಗಿನ ಸುಳಿಯು ೧೬೨ನೆಯ ಚಿತ್ರದಂತೆಯೇ ವೃಷಭ-ಲಗ್ನದ ಸಂಕೇತವಾಗಿರುವುದು. ಸಾಮಾನ್ಯ ಸುಖವುಳ್ಳ ಜೀವನ.

## ಮಿಥುನಲಗ್ನ [ಚಿತ್ರ-ಫಟ ; ೨೦]

ವೃಷಭಲಗ್ನದಲ್ಲಿ ಹೇಳಿದ ಬಿಡಿಬಿಡಿ ಕೊಂಬಿನಾಕಾರವಾದ ಸುಳಿ ರೇಖೆಗಳು ಒಂದಕ್ಕೊಂದು ಸೇರಿ (ಇಜ್ಜೋಡಿಯಾಗಿ) ಹೊರಹೊರಟಿರು ವುವು. ಎತ್ತಿನ ಹೆಗಲಿನ ಮೇಲೆ ಇದ್ದಂತೆ (Hump) ಮಾಂಸದ ಮುದ್ದೆಯು ಎಡಭಾಗದಲ್ಲಿ ಅಲ್ಪ ಮೇಲ್ಪದಿಗೆ ಸಾಗಿರುವುದು. ಸುಳಿಯಲ್ಲಿರುವ ಸುತ್ತು ರೇಖೆಗಳು ಒಂದರ ಪಕ್ಕಕ್ಕೊಂದು ಜೋಡಣೆಯಾಗಿರುವುದು.

ಚಿತ್ರ ೧೬೬ ರಲ್ಲಿ ಎರಡು ಸುಳಿಗಳು ಒಂದರ ಪಕ್ಕಕ್ಕೊಂದು ಮಿಲನ ವಾಗಿರುವುವು. ಭೂಭಾಗದಲ್ಲಿ ಸುಳಿಯು ಅತಿಯಾಗಿ ನುಗ್ಗಿರುವುದು. (ಇಜ್ಜೋಡಿ ರೇಖೆಗಳು, ಸುಳಿಗಳ ಸಮ್ಮಿಲನ) ಇದೇ ಮಿಥುನಲಗ್ನದ ಲಕ್ಷಣ.

ಮಿಥುನಲಗ್ನದಲ್ಲಿ ಜನಿಸಿದ ವ್ಯಕ್ತಿಗಳು ಮಹಾಶಿನಲ್ಲಿ ಮೃದು ಮತ್ತು ಎಲ್ಲ ಜನಾಂಗದಲ್ಲಿಯೂ, ಸಮಾಜದಲ್ಲಿಯೂ ಹೊಂದಿಕೊಂಡು ಹೋಗು ವರು. ಉದ್ದ ಕಡಿಮೆ, ಸಣ್ಣ ಮೈ, ಗುರು-ಹಿರಿಯರಲ್ಲಿ ಪೂಜ್ಯಭಾವ

ವುಳ್ಳವರು. ಗುಣವಂತರು, ದುಂದುವ್ಯಯಗಾರರು. ಬಂಧು-ಮಿತ್ರರುಗಳು ಅತಿಯಾಗಿರುತ್ತಾರೆ. ಮಧ್ಯಮಬುದ್ಧಿ (Normal Brain) ಒಪ್ಪಿಕೊಂಡ ಕಾರ್ಯವನ್ನು ನಿಧಾನವಾಗಿ ಮಾಡುವರು. ರವಿ, ಮಂಗಳ, ಗುರು ಗ್ರಹ-ಗಳು ಮಾರಕ ಫಲಪ್ರದರು. ಶುಕ್ರನೊಬ್ಬನೇ ಫಲದಾಯಕನು. ಆದರೂ ರವಿ, ಬುಧ ಬೆರಳಿನಲ್ಲಿ ಸಿರಿ. ಕೇಸರ ರೇಖೆಗಳು ಅತಿಯಾಗಿದ್ದು ಗೋಧಿ-ರೇಖೆಯು ಪ್ರಕಾಶವಾಗಿದ್ದರೆ ವ್ಯಕ್ತಿಗೆ ರಾಜಯೋಗ ಪ್ರಾಪ್ತಿಯಾಗುವುದು.

ಅಂಗುಷ್ಠದ ಸುಳಿ, ಆವರ್ತಗಳು ಭಿನ್ನವಾಗಿದ್ದು ಗೋದಿ, ಸಿರಿರೇಖೆ ಪ್ರಕಾಶವಾಗಿಲ್ಲದಿದ್ದರೆ ವ್ಯಕ್ತಿಯು ಶ್ರಮದಿಂದ, ಅಲ್ಪವಿದ್ಯೆಯಿಂದ, ರೋಗ-ಗಳಿಂದ ಪರಿತಪಿಸುವನು.

೧೬೬ ನೆಯ ಅಂಗುಷ್ಠದಲ್ಲಿ ಎರಡು ಸುಳಿಗಳು ಅತಿ ಸಮೀಪವಾಗಿವೆ. ಆದರೆ ಕೆಳಗಿನ ಸುಳಿಯು (೬೦-೧೬೦ನೆಯ ವೃಷಭಲಗ್ನದ ಸುಳಿಗಿಂತ) ಸ್ವಲ್ಪ ಮೇಲೆದ್ದು ನಿಂತಿರುವುದು. ಈ ಮಿಥುನಲಗ್ನದ ಚಿತ್ರದಲ್ಲಿ A. B ರೇಖೆಯು ಮಧ್ಯದಲ್ಲಿ ಸುಳಿಯುತ್ತ ಒಂದು ಬಿಳಿಭಾಗ ತೋರಿದೆ. ಮತ್ತೊಂದು ಹೊರಡುವುದರಲ್ಲಿರುವುದು. ಇದರಿಂದ ಸಂತಾನಭಾಗ್ಯ ನಿಧಾನ ಮತ್ತು A ದಿಂದ B ಕಡೆಗೆ ರೇಖೆ ಹಾದುಹೋಗಿರುವಾಗ ಸ್ವಲ್ಪ ದೂರದ ವರೆಗೆ ಈ ಗೋದಿರೇಖೆಯು ಅಲ್ಪ ಮಂಕಾಗಿರುವುದು; ನಂತರ ಪ್ರಕಾಶವಾಗಿರುವುದು. B ಸಮೀಪಿಸಿದಂತೆಲ್ಲ ಮತ್ತೊಂದು ರೇಖೆಯ ಸಹಾಯ ಸಿಗುತ್ತಿರುವುದು, ಇದರಿಂದ ವ್ಯಕ್ತಿಗೆ ೩೧, ೩೨ನೆಯ ವಯಸ್ಸು ಕಳೆಯುವ ವರೆಗೆ ಯಾವ ಮಹತ್ತರ ಕಾರ್ಯಸಾಧನೆಯೂ ಸಾಧ್ಯವಿಲ್ಲ. ಯಾವ ಸಹಾಯವೂ ಇಲ್ಲ. ೩೨ನೆಯ ವಯಸ್ಸಿನಿಂದ ವಿಶೇಷ ಭಾಗ್ಯಕಾಲವು. ೪೨, ೫೦ ರಿಂದ (ಸಹಾಯರೇಖೆಯ ಬಲದಿಂದ) ಕೀರ್ತಿ, ಐಶ್ವರ್ಯ, ಸುಖ ಹೆಚ್ಚುತ್ತ ಬಂದಿರುವುದು. ೧೬೭ನೆಯ ಅರ್ಧವೃತ್ತಾಕಾರ ಪದರಗಳು ಒಂದೊಂದು ಹತ್ತಿರ ಸೇರಿವೆ.

೧೬೮ನೆಯ ಚಿತ್ರದ ಪದರಗಳೆಲ್ಲ ಕತ್ತರಿಸದೆ ಜೋಡಣೆಯಾಗಿ ಹೋಗುವುದು. ೧ ರಿಂದ ೨ ರ ವರೆಗೆ ಇರುವ ರೇಖೆಯು ಪ್ರಥಮದಲ್ಲಿ ಮತ್ತು ಅಂತ್ಯದ ಕೆಲವು ದೂರದಲ್ಲಿ ಸಮಾನಾಂತರ ರೇಖೆಯಾಗಿರುವುದು. ಆದರೆ ೧ ರಿಂದ ಸ್ವಲ್ಪ ದೂರ ಸಾಗಿದ ನಂತರ ಅತಿ ದಪ್ಪವಾಗಿ ಮುಂದು

ವರೆದಿದೆ. ಇದರಿಂದ ದಪ್ಪವಾಗಿರುವ ಕಾಲ ೩೩ರಿಂದ ೪೩ನೆಯ ವಯಸ್ಸು ಕಳೆಯುವ ವರೆಗೆ ಮಾತ್ರ ವ್ಯಕ್ತಿಗೆ ವೃತ್ತಿಯಲ್ಲಿ ಶ್ರಮ, ಸಂಸಾರದಲ್ಲಿ ಬೇಸರ, ಸುಖ ಕಡಿಮೆ. ೪೪ರಿಂದ ಪುನಃ ದಿನದಿನಕ್ಕೂ ಸುಖ-ಶಾಂತಿ ಕಾಲ. ೩ ಉಪರೇಖೆಗಳು ಇರುವುದರಿಂದ ಸಂತತಿಗಳಿಂದ ವಿಶೇಷ ಐಶ್ವರ್ಯ, ೬೦ ನೆಯ ವಯಸ್ಸಿನ ನಂತರ ಈ ವ್ಯಕ್ತಿಗೆ ಲಗ್ನದಲ್ಲಿ ಗುರುವಿದ್ದರೂ ಅಶುಭ ಫಲ ಇಲ್ಲ. ಸಮಾಜದಲ್ಲಿ ಕೀರ್ತಿ, ಸುಖ, ದೈವಿಕ ಗುಣವು ವ್ಯಕ್ತಿಯಲ್ಲಿ-ರುವುದು.

೧೬೯ನೆಯ ಮಿಥುನಲಗ್ನA ರೇಖೆಯು ಅಲ್ಪ ದೂರ ಸಾಗಿದ ಮೇಲೆ ಮತ್ತೊಂದು ರೇಖೆಯು ಸಹಾಯಕ್ಕೆ ಬಂದಿರುವುದು. ಅತಿ ಬಾಲ್ಯದಲ್ಲಿ ವ್ಯಕ್ತಿಗೆ ಅನಾರೋಗ್ಯ, ಪೋಷಕರಿಗೆ ಶ್ರಮ, ಆದರೆ ಉಪರೇಖೆ ಸಹಕರಿಸುವ ಕಾಲ—೨೬ನೆಯ ವಯಸ್ಸಿನ ಕಾಲದಲ್ಲಿ ವಿವಾಹ, ವಿವಾಹವಾದ ನಂತರ ಸುಖವಾಗಿ ಜೀವನಹೊಂದಿರುವುದು.

೧೬೪ ಈ ಚಿತ್ರದಲ್ಲಿ ಚಕ್ರಾಕಾರದ ಗುರುತು ಹೊಂದಿರುವ ರೇಖೆಗಳು, ಎಳೆಎಳೆಗಳು ಒಂದಕ್ಕೊಂದು ಅತಿ ಸಮೀಪಿಸಿ ಜೊತೆಯಲ್ಲಿ ಸಾಗಿರುವುವು, ಆದರೆ ಮಿಥುನಲಗ್ನ ಮುಗಿಯುತ್ತ ಬಂದಿದೆ. ಗೋದಿ ರೇಖೆಯು ಪ್ರಥಮ ಭಾಗವೆಲ್ಲ ಅತಿ ದಪ್ಪವಾಗಿದೆ, ಸುಂದರವಾಗಿಲ್ಲ. ಆದರೆ ಕೆಲವು ದೂರದಿಂದ ಮಾತ್ರ ಉಪರೇಖೆ ಪ್ರಕಾಶವಾನವಾಗಿ ಹೊಂಟಿರುವುದು. ಇದರಿಂದ ೩೫ನೆಯ ವಯಸ್ಸಿನಿಂದ ವ್ಯಕ್ತಿಗೆ ಅಭಿವೃದ್ಧಿ.

೧೬೫ ಭೂಮಿಗೆ ಅತಿಯಾಗಿ ಹೊಂದಿಕೊಂಡಿರುವ ಚಕ್ರವಾಗಿದೆ. ಚಕ್ರದ ಮಧ್ಯದಲ್ಲಿ ನೇರವಾಗಿ ನಿಂತಿರುವುದು. (ಜೊತೆಜೊತೆ ರೇಖೆ ಉದ್ದವಾಗಿ ಚಕ್ರದ ಮಧ್ಯದಲ್ಲಿರುವುದು) ಚಕ್ರಾಕಾರ ಮೇಲೆದ್ದು ಕಾಣು ವುದರಿಂದ ಮಿಥುನಲಗ್ನದ ಅಂತ್ಯ. A ಯಿಂದ B ವರೆಗೆ ಡೊಂಕಾದ ದಪ್ಪವಾದ ಗೆರೆಯಿರುವುದರಿಂದ ವ್ಯಕ್ತಿಗೆ ಜಾತಕದಲ್ಲಿ ಫಲ ಕೊಡಬೇಕಾದ ಗ್ರಹಗಳೆಲ್ಲ ರಾಹು ಕೇತುಗಳ ಒಳಗೆ ಸೇರಿದ್ದಾರೆ. ಒರಟು ಕೆಲಸ, ಶ್ರಮ ಜೀವನ ಈ ವ್ಯಕ್ತಿಯದು. ಮತ್ತೊಂದು ಕಾರಣವೆಂದರೆ A, B ರೇಖೆಯ ಕೆಳಗಿನ ಅಂತರದಲ್ಲಿ ಕೇಸರ ( Kesara Rekha ) ರೇಖೆಗಳು ಇಲ್ಲ, ಇದರಿಂದ ಶ್ರಮಜೀವಿ.

## ಕರ್ಕಾಟಕ ಲಗ್ನ [ಚಿತ್ರ-ಪುಟ : ೨೧]

ಮಿಥುನಲಗ್ನದಲ್ಲಿ ಕವಚಾನಂತ ಅಲ್ಪ ಬಾಗಿದ್ದು ಜೊತೆಜೊತೆಯಾಗಿದ್ದ ಸುಳಿರೇಖೆಗಳು ಕರ್ಕಾಟಕಲಗ್ನದಲ್ಲಿ ಅರ್ಧಚಂದ್ರ, ಪೂರ್ಣಚಂದ್ರ ಮತ್ತು ಶುಕ್ಲಪಕ್ಷದ ೩ನೆಯ ದಿವ ಆಕಾರದಲ್ಲಿ ಕಾಣುವ ಚಂದ್ರನಂತಹ ಸುರುಳಿಗಳ ಆವರ್ತಗಳು ಕಾಣುವುವು.

ಹೆಬ್ಬೆರಳಿನಲ್ಲಿ ಶಂಖಾಕಾರ ಕಂಡರೂ ಬೆರಳ ಎಡ, ಬಲ, ಮೇಲೆ, ಕೆಳಗೆ ಭಾಗಗಳಲ್ಲಿ ಸುಳಿಯ ಸುತ್ತುವಾಟ್ರಿನ ಆಕಾರದಲ್ಲಿ ಅರ್ಧಚಂದ್ರಾಕಾರವು ಕಾಣುವುದು. ಚಕ್ರದ ಅಂಗುಷ್ಠದಲ್ಲಿ ಪೂರ್ಣಚಂದ್ರ ಪೂರ್ಣಿಮೆಯಂತೆ ಆಕಾರ ಭಾಸವಾಗುವುದು.

ಈ ಲಗ್ನಕ್ಕೆ ಶುಕ್ರ, ಶನಿ, ಬುಧ ಗ್ರಹಗಳು ಅಶುಭ ಆದರೆ ಶುಕ್ರ ಪರ್ವದಲ್ಲಿ ಕೇಸರ ಕಾರಾರೇಖೆಗಳು ಇದ್ದರೆ ವಿಶೇಷ ಫಲ ಲಭಿಸುವುದು. ಗುರುಪರ್ವದಲ್ಲಿ ಧ್ವಜ, ಚೌಕ, ಗುಣಕ ಚಿಹ್ನೆ ಇದ್ದರಂತೂ ವಿಶೇಷ ಶುಭ ಫಲವಿರುತ್ತದೆ. ಹೃದಯರೇಖೆಯು ಸೊಗಸಾಗಿದ್ದು ಗುರುಪರ್ವದಲ್ಲಿ ತ್ರಿಕೋಣವಿದ್ದರೆ ರಾಜಯೋಗ ಪ್ರಾಪ್ತಿಯಾಗುವುದು.

೧೭೦ನೆಯ ಅಂಗುಷ್ಠದಲ್ಲಿ C ಗುರುತಿನ ಮೇಲ್ಭಾಗದಲ್ಲಿ ದಳ ಸುಳಿಗಳು ಎಡಗಡೆಯಲ್ಲಿ ನೋಡಿದಾಗ ಅರ್ಧಚಂದ್ರಾವೃತ್ತ ಕಾಣುವುದು. ಮತ್ತು ದಳ ಸುಳಿಗಳು ಶುಕ್ಲಪಕ್ಷದ ಬಿದಿಗೆ, ತದಿಗೆ ಚಂದ್ರನಷ್ಟು ಆಕಾರಗಳು ಕಾಣುವುವು.

ಮಧ್ಯದ ಸುಳಿಯ ಸಮೀಪದಲ್ಲಿ ಅಪೂರ್ಣವಾದ ಗುಣಕ ಚಿಹ್ನೆ X ಕಾಣುವುದು ಇದರಿಂದ ಈ ಲಗ್ನಕ್ಕೆ ಶತ್ರುವಾದ ಗ್ರಹವೊಂದು ಕರ್ಕಾಟಕದಲ್ಲಿ ಇದೆ ಎಂದು ತಿಳಿಯುವುದು.

A ದಿಂದ B ವರೆಗಿನ ಆಸ್ತ್ರರೇಖೆಯು A ದಿಂದ $\frac{1}{3}$ ಭಾಗದ ವರೆಗೆ ಅಸ್ಪಷ್ಟವಾಗಿ ಕಾಣುವುದು. ವ್ಯಕ್ತಿಯು ಬಾಲ್ಯದಲ್ಲಿ ಅಪವಾದ, ಅನಾರೋಗ್ಯ, ವಿದ್ಯಾಭ್ಯಾಸಕ್ಕೆ ಅಡಚಣ ( ಮೇಲೆ ಹೇಳಿದ X ಗುರುತಿನಿಂದ ) ಪ್ರೀತಿ, ಪ್ರೇಮಕ್ಕೆ ಧಕ್ಕೆ ಅಥವಾ ವಿರಹವೇದನೆಯನ್ನು ಅನುಭವಿಸುವರು.

ಉಳಿದ $\frac{2}{3}$ ಭಾಗ ವಯಸ್ಸಿನಲ್ಲಿ ಎರಡು ಮಣಿರೇಖೆಯು ಪೂರ್ಣವಾಗಿರುವುದರಿಂದ ಈ ಕಾಲದಲ್ಲಿ ವಿವಾಹ, ಪತ್ನಿಯ ಸಂಬಂಧಿಕರ ಕಡೆ

ಯಿಂದ ಆಸ್ತಿ, ದ್ರವ್ಯ ಮತ್ತು ಉನ್ನತ ಸಂಪಾದನೆ, ಸುಖಪ್ರಾಪ್ತಿಯಾಗ ಬಹುದು.

A, B ಯಿಂದ ಹೊರಟ ರೇಖೆ ಸುಳಿಯಲ್ಲಿ ಆಕೃತಿಯನ್ನು ಮುಟ್ಟು ತ್ತಿರುವಾಗ C ಅಡ್ಡರೇಖೆ ತಡದಿದೆ. ವ್ಯಕ್ತಿಯು ಪತ್ನಿಗೆ ಆಗಾಗ್ಗೆ ಅನಾ ರೋಗ್ಯ, ಶತ್ರುಗಳ ಕಾಟ, ಸಂತತಿಗಳಾಗುವುದು ಸ್ವಲ್ಪ ನಿಧಾನ.

ಗೋದಿರೆ ಖೆಯಲ್ಲಿ ೨ ಗೋದಿಕಾಳುಗಳಾಕಾರ ಪೂರ್ಣವಾಗಿದ್ದರೆ ವ್ಯಕ್ತಿಗೆ ಅನಾಯಾಸವಾಗಿ ಪರರ ಆಸ್ತಿ, ಐಶ್ವರ್ಯಪ್ರಾಪ್ತಿಯು, ಉಪ ಸ್ತ್ರೀಯರುಗಳ ಸ್ನೇಹವು ಲಭಿಸುವುದು.

೧೭೧ ಲಗ್ನದ ಸಂಖ್ಯೆಯು ಗುರುತು. ಚಂದ್ರನ ಗುರುತಿನ ಕಡೆ ಯಿಂದ ಪರೀಕ್ಷಿಸಿದರೆ ಮತ್ತು ಬೆರಳಿನ ಎಡಭಾಗದಿಂದ ಮಧ್ಯದ ಸುಳಿಯ ವರೆಗೆ ಇರುವ ಆವರ್ತಗಳೆಲ್ಲಾ ಶುಕ್ಲಪಕ್ಷದ ಹತ್ತನೆಯ ದಿನ ಕಾಣುವ ಚಂದ್ರಾಕಾರದಂತೆ ಕಾಣುವುದು. ಸುಳಿಯ ಮಧ್ಯದಲ್ಲಿ ( ಮಧ್ಯಬಿಂದುವಿನ ಸುತ್ತ) ಆವರ್ತರೇಖೆಗಳು ಪ್ರಕಾಶವಾಗಿರುವುದರಿಂದ ಲಗ್ನದಲ್ಲಿ ಚಂದ್ರ ನಿರುವನು.

೧೭೨-ಈ ಚಿತ್ರದ ಮಧ್ಯದಲ್ಲಿ ಎರಡು ಸುರುಳಿಗಳು ಇರುವುವು. ಎರಡೂ ಸಹ ಅರ್ಧಚಂದ್ರಾಕಾರವಾಗಿರುವುವು. ಭೂಭಾಗ, ಆಕಾಶಭಾಗ, ಬಲಭಾಗಗಳಲ್ಲಿ ಚಂದ್ರನೋಪಾದಿಯಲ್ಲಿ ಕಾಣಬರುವುದು. ಗೋದಿ ರೇಖೆಯು ಸುರುಳಿನಲ್ಲಿ ಸ್ವಲ್ಪಭಾಗ ದಪ್ಪದಪ್ಪವಾಗಿದೆ. ಸುಮಾರು ೨೬ ನೆಯ ವಯಸ್ಸಿನ ವರೆಗೆ ಶ್ರಮದಿಂದ ಪೋಷಕರೊಡನೆ ಸಹಕರಿಸಿ ಕಷ್ಟದಿಂದ ಬಾಡಿದಾ ನಂತರ ಭಾಗ್ಯೋದಯ, ಸುಖಕಾಲ ಪ್ರಾಪ್ತಿ.

೧೭೩ ಕಳತ್ರಕಟಕಲಗ್ನ:— ಸಂಖ್ಯೆಯನ್ನು ಲಗ್ನದಲ್ಲಿರುವ ಗ್ರಹ ಚಿಹ್ನೆಯನ್ನು ಗುರುತಿಸಿರುವ ಬಲಹೆಬ್ಬೆರಳ ಚಿತ್ರದ ಎಡಭಾಗದಲ್ಲಿ ಅರ್ಧ ವೃತ್ತಾಕಾರದ ಸುರುಳಿರೇಖೆಗಳು ಇರುವುವು. ಭೂಮಿಯ ಮೇಲ್ಭಾಗ ದಲ್ಲಿ ಚಂದ್ರಾಕಾರವಿರುವುದು. ಆದರೆ ಸುಳಿಭಾಗವೆಲ್ಲ ಅಡ್ಡ ಬಿಳಿಯರೇಖೆ ಯಿಂದ ಭೇದಿಸಲ್ಪಟ್ಟಿರುವುದು. (ಸುಳಿಯ ಕೇಂದ್ರಸ್ಥಾನ ಛಿದ್ರವಾಗಿದೆ). ಇದರಿಂದ ಈ ಲಗ್ನಕ್ಕೆ ಪಾಪಿಯಾದ ಗ್ರಹವೊಂದು ಲಗ್ನದಲ್ಲಿ ನೆಲಸಿದೆ ಎಂದು ತಿಳಿಯುವುದು. ಈ ಲಗ್ನದಲ್ಲಿ ಬಾಧಗ್ರಹವಿರುವುದು. ಎತ

ಅಂಗುಷ್ಠದಲ್ಲಿಯೂ ಅಷ್ಟರೇಖೆ ಭಿನ್ನವಾಗಿದೆ. ಆದರೆ ಅಲ್ಪಸ್ವಲ್ಪ ಶುಭ ಸುರುಳಿ ಇರುವುದು. ಇದಕ್ಕೆ ಕಾರಣ ಈ ಲಗ್ನಕ್ಕೆ ಯೋಗ ಕೊಡುವ ಕುಜಗ್ರಹನು ಅಂಶದಲ್ಲಿ ಕರ್ಕಾಟಕದಲ್ಲಿರುವನು.

ಬಲ ಅಂಗುಷ್ಠದ ಗೋದಿರೇಖೆ ದಪ್ಪವಾಗಿದ್ದರೂ ದ್ವಿತೀಯ ಭಾಗ ದಿಂದ ಸಹಾಯಕರೇಖೆ ಸಹಕರಿಸುವುದು. ಇದರಿಂದ ೩೩, ೩೪ನೆಯ ವಯಸ್ಸಿನಿಂದ ಸುಖಶಾಂತಿ ಅಲ್ಪಮಟ್ಟಿಗೆ ಲಭಿಸುವುದು. ಎಡ ಅಂಗುಷ್ಠ ದಲ್ಲಿ ಎರಡು ರೇಖೆಗಳು ಸಮಾನಾಂತರವಾಗಿರುವುವು. (ವಿ. ಸೂ.—Left ಎಂದು ಬರೆದಿರುವ ಕಡೆಯಿಂದ ಬಾಲ್ಯ ಯೌವನಾದಿ ಕಾಲ ಅಳೆಯ ಬೇಕು. ಎಡ ಅಂಗುಷ್ಠ ನೋಡುವಾಗ) ಆದರೆ ಮೇಲ್ಭಾಗದ ರೇಖೆ ಸುರುಳಿನಲ್ಲಿ ಬಾಲದಾಕಾರ. ಇದರಿಂದ ಮಧ್ಯಮ ಸುಖ.

ಬಲ ಅಂಗುಷ್ಠದಲ್ಲಿ ಗೋದಿರೇಖೆ ಸುರುಳಿನಿಂದ ದಪ್ಪ. ಈ ರೇಖೆಯ ಕೆಳಗೆ ಕೇಸರರೇಖೆಗಳಿಲ್ಲ ಮತ್ತು ಎಡ ಅಂಗುಷ್ಠದಲ್ಲಿ ಎರಡು ಪಕ್ಕಗಳಿಂದ ಹೊರಟ ರೇಖೆಗಳು ಸುಳಿಯನ್ನು ಭೇದಿಸಿರುವುದರಿಂದ ಇವರು ಹುಟ್ಟಿದ. ಮನೆಯಲ್ಲಿ ಮಶವೃದ್ಧಿಗೆ ಅಡಚಣೆಗಳು ಮತ್ತು ಇವರಿಗಿಂತ ಹಿರಿಯರಿಗೆ ವಿವಾಹಸುಖಭಂಗವೂ ಆಗಿರುವುದೆಂದು ತಿಳಿಯಬಹುದು.

ಸುಳಿಯ ಕೇಂದ್ರವೇ ಪಿತೃಭಾವವನ್ನು ಹೇಳುವುದರಿಂದ ಪಿತೃವಿಗೆ ಪೂರ್ಣ ಆಯುವಿಲ್ಲವೆಂದು, ವ್ಯಕ್ತಿಯ ಪ್ರಾಪ್ತವಯಸ್ಸಿನೊಳಗೆ ಪಿತೃ ದೂರವಾಗುವರೆಂದು ಶಸ್ತ್ರರೇಖೆಯಿಂದ ಭೇದಿಸಿರುವ ಸುಳಿಕೇಂದ್ರವನ್ನು ಅರಿತು ಹೇಳುವುದು.

೧೭೭, ೩೮ RT ಈ ಅಂಗುಷ್ಠದ ಅಂಚಿನಲ್ಲಿ ಆಕಾಶ, ಸುರುಳಿ, ಶಿರ, ಎಡಭಾಗದಲ್ಲಿ ಚಂದ್ರಾಕಾರವು $\frac{3}{4}$ ಭಾಗ ಕಾಣುವುದು. ಒಂದು ಸುಳಿಯ ಕೇಂದ್ರಆವರ್ತದ ಶಿರದಿಂದ ಹೊರಟ ರೇಖೆಯು ಪಕ್ಕದ ಸುಳಿಯ ಕೇಂದ್ರದೊಳಗೆ ಪ್ರವೇಶಿಸಿರುವುದು. ಸುಳಿಯ (ಮಧ್ಯ) ಕೇಂದ್ರ ಭಾಗವು ಪ್ರಕಾಶವಾಗಿರುವುದು. ಇದರಿಂದ ಲಗ್ನದಲ್ಲಿ ಶುಭಗ್ರಹವಿರುವು ದೆಂದು ಕೇಂದ್ರಸುಳಿಯು ಭಿನ್ನವಾಗದೆ ಇರುವುದರಿಂದ ಲಗ್ನಾಧಿಪತಿ ಅಥವಾ ಲಗ್ನದಲ್ಲಿ ಸೌಮ್ಯಗುಣವುಳ್ಳ ಗ್ರಹವಿರುವುದೆಂದು ತಿಳಿಯಬ ಹುದು.

ದ್ವಿತೀಯ ಸುಳಿಯಲ್ಲಿ (ಬಲಗಡೆ) ಬಿಳಿಚುಕ್ಕೆಗಳು ಕಾಣುವುದರಿಂದ ಮತ್ತು ಎಡಸುಳಿಗೂ ಸಂಬಂಧ ನೀಡಿರುವ ಅದೃಷ್ಟರೇಖೆಯು ಅಂತ್ಯದಲ್ಲಿ ಸೇರಿಕೊಂಡಂತೆ, ಒಂದು ಬಿಳಿ ಚುಕ್ಕೆ ಇರುವುದರಿಂದ ಸಪ್ತಮದಲ್ಲಿ ( ಮಿತ ಗ್ರಹಗಳು) ಪ್ರಕಾಶವಾನವಾದ ಗ್ರಹಗಳು ಇರುವವೆಂದು ತಿಳಿಯುವುದು. (ಸಪ್ತಮದಲ್ಲಿ ರವಿ ಮತ್ತು ಗುರು ಇರುವರು.) ಸಪ್ತಮದಲ್ಲಿ ರಾಜಗ್ರಹ ಶುಭಗ್ರಹವಿದ್ದರೂ ಶಕ್ತಿಹೀನರು. ಮತ್ತು ಚಂದ್ರನ ಹೊರತು ಉಳಿದ ಗ್ರಹಗಳೆಲ್ಲ ರಾಹು, ಕೇತುಗಳೊಳಗೆ ಸೇರಿರುವರು. ಕಪ್ಪು ಬಣ್ಣದಲ್ಲಿ ಚಂದ್ರಾಕಾರ ಗುರುತಿಸಿರುವುದರ ಕೆಳಗೆ ಹರಿತವಾದ ರೇಖೆಯು ಸುಳಿಯ ಆವರ್ತವನ್ನು ಭೇದಿಸಿದೆ. ಅದೇ ನೇರವಾಗಿ ಬಲಗಡೆ(ಚಿತ್ರ ಸಂಖ್ಯೆಯ ಕೆಳಗೆ) ಒಂದು ಬಿಳಿ ರೇಖೆ ಬಲಸುರುಳಿಯನ್ನು ಭೇದಿಸಿದೆ.

ಎಲ್ಲದಕ್ಕೂ ಮುಖ್ಯವಾಗಿ ಗೋದಿರೇಖೆಯು ಸುರುಳಿನಿಂದ ೩ ಭಾಗದ ವರೆಗೆ ದಪ್ಪವಾಗಿಯೂ, ರಂಧ್ರವನ್ನು ಹೊಂದಿರುವುದಾಗಿಯೂ ಇರುವುದು. ಈ ರೇಖೆಯು ಅಂತ್ಯ (೫ ಭಾಗ)ದಲ್ಲಿ ಅಲ್ಪ ಗೋದಿ ಆಕಾರ ಹೊಂದಿದೆ. ಇದರಿಂದ ವ್ಯಕ್ತಿಯು ನಿರ್ದಿಷ್ಟ ವೃತ್ತಿಶೀಲನಾಗಲಿಲ್ಲ. ಬುದ್ಧಿವಂತ, ಸುರುಳಿಯು ಕೇಂದ್ರಗಳು ಪ್ರಕಾಶವಾಗಿರುವುದರಿಂದ ವಿದ್ಯಾವಂತ, ಗೋದಿ-ರೇಖೆ ಸರ್ಪಾಕಾರವಾಗಿದೆ; ಇದರಿಂದ ಬಾಲ್ಯದಲ್ಲಿ ಮಾತೃವಿಯೋಗ, ಸುಳಿಗಳ ಕೇಂದ್ರ ಶುಭವಿರುವುದರಿಂದ ಪಿತೃಸುಖವುಂಟು.

ಆದರೆ ಈ ವ್ಯಕ್ತಿಗೆ ೩೮, ೪೦ನೆಯ ವಯಸ್ಸಿನ ವರೆಗೆ ಸಂಸಾರ ಭಾಗ್ಯವೇ ಇಲ್ಲ. ಸ್ತ್ರೀಸುಖ ವಿಶೇಷವಾಗಿ ಲಭಿಸುವುದು- (ಕಾರಣ ಭೂಮಿಯ ಮೇಲೆ ಸರ್ಪ ನಿಂತು ದ್ವಿತೀಯ ಸುಳಿಯನ್ನೇ ನೋಡುತ್ತಿರುವುದು). ವ್ಯಕ್ತಿಯು ಜೀವನ ಜೂಜು, ಲಾಟರಿ ಇಂಥ ವೃತ್ತಿಗಳಿಂದ ನಡೆಯುವುದು. ಮತ್ತು ಎಡಹಸ್ತದ ಶಿರದಲ್ಲಿ ಎರಡು ಗುಣಕಚಿಹ್ನೆ ಇರುವುದರಿಂದ ಅವಿಯಲ್ಲಿ ಪ್ರೀತಿಸಿದ ಸ್ತ್ರೀಯರಿಂದ ಅನ್ಯಾಯಗಳು, ಅಪಪ್ರಚಾರ ಗಳುಂಟಾಗುವುವು. ಬಲಹಸ್ತದಲ್ಲಿ ೫ ಭಾಗದ ಕಡೆಗೆ ಅಲ್ಪ ಗೋದಿಯ ಚಿಹ್ನೆ, ಅದು ಒಡೆದಿದೆ. ಇದರಿಂದ ೪೦ನೆಯ ವಯಸ್ಸಿನ ಮೇಲೆ ಅಲ್ಪ ನೆಲೆಯಾದ ಜೀವನ.

ಸುಳಿಯ ಕೇಂದ್ರದಲ್ಲಿ ಬಿಳಿ ಚುಕ್ಕೆಗಳು ಇರುವುದರಿಂದ ಪಿತೃವು ರಾಜದಂಡನೆಗೆ ಗುರಿಯಾಗಿದ್ದನೆಂದು ತಿಳಿಸುವುದು.

ಈ ವ್ಯಕ್ತಿಗೆ ೪೦ನೆಯ ವಯಸ್ಸಿನ ತಿಗ್ರಿಯಿಂದ, ದಪ್ಪ ಕೇಸರ ರೇಖೆಗಳು ಗೋದಿರೇಖೆ ಶಿಥಭಾಗದಲ್ಲಿರುವುದರಿಂದ ಮೇಲೆ ಹೇಳಿದ ವಯಸ್ಸಿನಿಂದ ವಿಶೇಷ ಫಲ ಲಭಿಸುವುದು. ಆದರೂ ಸ್ಥಿರವಾದ ಭಾಗ್ಯವಿಲ್ಲ. ಅಂತ್ಯದಲ್ಲಿ ಈ ರೇಖೆಯು ಟಿಸಿಲೊಡೆದಿರುವುದು.

ಗೋದಿರೇಖೆಯ ಮೇಲೆ ಬಾಯ್ಬಂತ ಉದ್ದನೆಯ ಗೆರೆ ಇದ್ದರೆ, ವ್ಯಕ್ತಿಗೆ ಮಾತ್ರೊಬ್ಬ ಭ್ರಾತೃ ( Only two brothers iucluding the native ) ಇರುವರೆಂದು ತಿಳಿಸುತ್ತದೆ.

## ಸಿಂಹಲಗ್ನ

ಹಿಂದೆ ಕರ್ಕಾಟಕಲಗ್ನದಲ್ಲಿ ವರ್ಣಿಸಿರುವ ಅರ್ಧಚಂದ್ರ, ಪೂರ್ಣಚಂದ್ರ ಆಕಾರದ ಪೂರ್ಣ ಗುಣಗಳು ಈ ಲಗ್ನದಲ್ಲಿ ಅದ್ಭಗಲವನ್ನು ಜಾಸ್ತಿಯಾಗಿ ಹೊಂದುವುದು; ಮತ್ತು ಮುಖಭಾಗವು ಶಿರಭಾಗಕ್ಕಿಂತ ಅಗಲವಾಗಿರುತ್ತದೆ. ಕೆಲವುಬಾರಿ ೧೮೬ ನೆಯ ಚಿತ್ರದಲ್ಲಿರುವಂತೆ ಸಿಂಹದ ಮೂಗು, ಬಾಯಿಗಳ ಆಕಾರವೂ ಮತ್ತೆ ಕೆಲವು ಚಿತ್ರಗಳಲ್ಲಿ ಮುಖವನ್ನು ಹೊರಗೆ ಬಾಗಿಸಿ ಮಲಗಿರುವ ಸಿಂಹದ ಮುಖದ ಆಕಾರವೂ (೧೮೭ ನೆಯ ಚಿತ್ರ) ಕಾಣುವುದು, ಇದೇ ಸಿಂಹಲಗ್ನದ ಸಂಕೇತ.

ಈ ಲಗ್ನದಲ್ಲಿ ಹುಟ್ಟಿದವರು ಕಟುಭಾಷಣಕಾರರು; ಸ್ವರವು ಅತಿಯಾಗಿ ಗಂಟಲಿನಿಂದಲೇ ಪ್ರಾರಂಭವಾಗುವುದು. ಉಷ್ಣ ಹಾಗೂ ಪಿತ್ತ ಪ್ರಕೃತಿಯುಳ್ಳವರೂ, ಅಗಲವಾದ ಮುಖವುಳ್ಳವರೂ, ಸಣ್ಣದಾದ ಸೊಂಟವುಳ್ಳವರೂ ಆಗಿರುತ್ತಾರೆ. ಈ ಲಗ್ನಕ್ಕೆ ಶನಿ, ಬುಧ, ಶುಕ್ರರು ಕ್ರೂರರು. ಅಂಗಾರಕನು ಶುಭನು. ಗುರುವಿನೊಡನೆ ಸೇರಿದ ಕುಜನು ರಾಜಯೋಗವನ್ನು ನೀಡುವನು.

೧೮೭ನೆಯ ಚಿತ್ರದಲ್ಲಿ ಮುಖ ಅಗಲವಾಗಿರುವುದು ಶಿರಭಾಗವು I, J, K, L ಕಡೆಗೆ ಒರಗಿದಂತೆ ಕಾಣುವುದು.

ಗೋದಿರೇಖೆ (A,B)ಯು ಸುರುಳಿನಲ್ಲ ಒಡೆದು ಸೀಳುಗಳಾಗಿರುವುವು. ಇದರಿಂದ ವ್ಯಕ್ತಿಯು ಬಾಲ್ಯದಲ್ಲಿ ವಿಶೇಷ ಕಷ್ಟಗಳನ್ನು, ವಹಾತ್ಯವಿಯೋಗ,

ವಿದ್ಯಾಭಂಗ ಅನುಭವಿಸಿರುವನು. A ದಿಂದ C ವರೆಗೆ ಸುಮಾರು ೩೨ ಸೆಂ. ೩೩ ವರ್ಷಗಳು. ಅಲ್ಲಿಯ ವರೆಗೆ ರೇಖೆಗಳು ಭಿನ್ನವಾಗಿರುವುವು. ಇದರಿಂದ ೩೩ ನೆಯ ವಯಸ್ಸಿನ ವರೆಗೆ ಶ್ರಮಜೀವನ. ನಂತರ ವ್ಯಕ್ತಿಗೆ ಕೀರ್ತಿ, ದ್ರವ್ಯಸುಖಕಾಲ ಪ್ರಾರಂಭವಾಗುವುದು. (From C) ಉಪಗೋದಿ- ರೇಖೆಯು D ನೇರದಿಂದ ಸುರುವಾಗಿರುವುದು ಇದರಿಂದ ವ್ಯಕ್ತಿಗೆ ೩೮ರಿಂದ ಸಂಸಾರ, ಉನ್ನತಪದವಿ ಲಭಿಸುವುದು. G ರೇಖೆಯು ಮೇಲ್ಪದಿಯೀಂದ ಸುಳಿಯ ಕೇಂದ್ರಕ್ಕೆ ಬಿಳಿಯ ಎರಡು ರೇಖೆಗಳು ಸಾಗಿರುವುವು. ಇದರಿಂದ ಚಂದ್ರನ ಜೊತೆಯಲ್ಲಿ ಎರಡು ಗ್ರಹಗಳಿರುವುವೆಂದು ವ್ಯಕ್ತವಾಗುವುದು. (ರವಿ, ಬುಧ, ಚಂದ್ರ) ಆವರೆ H ಅಡ್ಡರೇಖೆಯು ಸುಳಿಯ ಕೇಂದ್ರದತ್ತ ಸಾಗಿದೆ. ಇದರಿಂದ ಸಪ್ತಮದಲ್ಲಿ ಒಂದು ಗ್ರಹ (ಶನಿ) ಇರುವುದು.

ಸುಳಿಕೇಂದ್ರದಲ್ಲಿ ಬಿಳಿ ಛಾಯೆ ಮತ್ತು ಭಿನ್ನ ಆವರ್ತರೇಖೆಗಳು ದಪ್ಪವಾಗಿ ಇರುವುವು. ಇದರಿಂದ ಲಗ್ನದಲ್ಲಿ ಗ್ರಹವಿರುವುದೆಂದು ತಿಳಿಯು ವುದು. (ಕುಜಲಗ್ನದಲ್ಲಿ) ಲಗ್ನದಲ್ಲಿ ಕುಜ, ಸಪ್ತಮದಲ್ಲಿ ಶನಿ ಇರುವುದ ರಿಂದ ವಿವಾಹಕ್ಕೆ ವಿಶೇಷ ತೊಂದರೆ. ೩೮ನೆಯ ವಯಸ್ಸಿನಿಂದ ಸಂಸಾರ ಭಾಗ್ಯವಿರುವುದು.

G ರೇಖೆಯು ಮೇಲೆ ಹೊರಟಿರುವ ರೇಖೆಯಲ್ಲದ ( E ರೇಖೆ) ಮತ್ತೊಂದು ಉಪರೇಖೆ ಹೊರಟಿರುವುದರಿಂದ ವ್ಯಕ್ತಿಯು ಅತ್ಯಂತ ಕೀರ್ತಿ, ವಿದ್ಯಾ, ಭಾಗ್ಯವಂತನಾಗಿರುವನು.

ಚಿತ್ರ ೧೮೩—ಅಡ್ಡಗಲವಾದ ಚಕ್ರ, ಶಿರಭಾಗವು ಅಲ್ಪ ಅಗಲ ವಾಗಿರುವುದು, ಭೂಭಾಗ ಮತ್ತು ಚಕ್ರಭಾಗದ ಎರಡು ಕಡೆಗಳಲ್ಲೂ ಗುಣಕ ಚಿಹ್ನೆ ಅತಿಯಾಗಿರುವುದು. ವ್ಯಕ್ತಿಗೆ ಪ್ರೀತಿ-ಪ್ರೇಮಗಳಲ್ಲಿ ಭಂಗ, ಅಶಾಂತಿ. ಗೋದಿರೇಖೆಯು ಕೆಳಭಾಗದಲ್ಲಿ ಉದ್ದನಯ ರೇಖೆಗಳು ಇರುವುದರಿಂದ ವ್ಯಕ್ತಿಯು ೪೨ ನೆಯ ವಯಸ್ಸಿನವ ಧನಿಕನಾಗುವನು.

೧೮೪ ಶಿರಭಾಗವು M ಗುರುತಿನ ಮೇಲ್ಪದಿಗೆ ಹೆಚ್ಚಾಗಿ ಸಾಗಿರು ವುದು. S ಭಾಗದಲ್ಲಿ ಆವರ್ತಗಳು ಕಡಿಮೆಯಾಗುತ್ತಿರುವುವು. ಗೋಧಿ ರೇಖೆಯು ಮೇಲ್ಭಾಗದಲ್ಲಿ T ಯಿಂದ M ವರೆಗೆ ಭೂಭಾಗವು ಹೆಚ್ಚಾಗಿ ಕಾಣುತ್ತಿರುವುದು. ಇದೇ ಸಿಂಹಲಗ್ನದ ಅಂತ್ಯವೆಂದು ತಿಳಿಸುತ್ತಿರುವ

ಗುರುತು. ಸುಳಿಯ ಕೇಂದ್ರದಲ್ಲಿ ಸಣ್ಣ ವೃತ್ತಾಕಾರವಿರುವುದರಿಂದ ಲಗ್ನದಲ್ಲಿ ಶುಭಗ್ರಹದ ಸೂಚನೆ.

೧೮೫—ಸಿಂಹದ ಮುಖಭಾವ, ಎಡಹೆಬ್ಬೆರಳ ಮುದ್ರೆಯದಾಗಿರುವುದರಿಂದ ಗೋದಿರೇಖೆಯನ್ನು A ಕಡೆಯಿಂದ ಅಳೆಯಬೇಕು. A ಯಿಂದ B ವರೆಗೆ ರೇಖೆಯು ನೊಗಸಾಗಿ ಕಾಣುವುದಿಲ್ಲ, ಛಿನ್ನವಾಗಿದೆ. ಇದರಿಂದ ಬಾಲ್ಯದಲ್ಲಿ ಸ್ವಸ್ಥಳ ಬಿಟ್ಟು ಪರಸ್ಥಳ ಸೇರಿ (Bಯಿಂದ) ೨೪ ನೆಯ ವಯಸ್ಸಿನಿಂದ ಪ್ರಾಬಲ್ಯಹೊಂದುವನು.

೧೮೬—ಅಂಗುಷ್ಠದ ಮಧ್ಯಭಾಗದಲ್ಲಿ ಗುಂಗುರು ಮತ್ತು ಅಲೆ_ಅಲೆಯಾದ ಆವರ್ತವಿರುವುದು. ಹೋಲಿಸಿ ನೋಡಿದಾಗ ಸಿಂಹದ ಮುಖಭಾವ ಪೂರ್ಣವಾಗಿ ಕಾಣುವುದು. ಇದು ಪರಿಪೂರ್ಣ ಸಿಂಹಲಗ್ನ.

೧೮೮ನೆಯ ಚಿತ್ರ—ಚಕ್ರಾಕಾರ, ಮಧ್ಯದಲ್ಲಿ ಅಗಲವಾದ ಬಾಯಿಯ ಆಕಾರ ವರ್ತುಲದಲ್ಲಿ ಗುರುತಿನ ಕೆಳಗೆ ಗುಣಕಚಿಹ್ನ ಇದು ವ್ಯಕ್ತಿಯ ಸಾಂಸಾರಿಕ ಅಶಾಂತಿಯನ್ನು ತೋರಿಸುವುದು ೧೮೭-ಈ ಚಿತ್ರದಲ್ಲಿ ಸಿಂಹಲಗ್ನ ಕೇವಲ ಅಲ್ಪ ಉಳಿದಿರುವುದು (ಶಿರಭಾಗದಿಂದ ಪೂರ್ಣ ಆವರ್ತವೃತ್ತಗಳಿಲ್ಲ).

ಮಧ್ಯದ ಕೇಂದ್ರದಲ್ಲಿ ಮೊಗ್ಗಿನ ಆಕಾರವಿರುವುದು. ಮತ್ತು ಬಲಭಾಗದಿಂದ ಬಳಿಸು ಬಾಯಿ ಒಳಗಡೆಗೆ ಪ್ರವೇಶಿಸಿರುವುದು ಲಗ್ನದಲ್ಲಿ ಗ್ರಹಗಳಿರುವ ಸಂಕೇತ.

## ಕನ್ಯಾಲಗ್ನ

ಹಿಂದೆ ಸಿಂಹಲಗ್ನದಲ್ಲಿ ಸುಳಿಯ ಮುಖವು ಅಗಲವಾಗಿರುವುದು ಎಂದು ವಿವರಿಸಿರುವುದು. ಕನ್ಯಾಲಗ್ನವು ಸ್ತ್ರೀಸಂಕೇತವುಳ್ಳದ್ದು. ಈ ಲಗ್ನದಲ್ಲಿ ಸುರುಳಿಗಳು (ಆವರ್ತಗಳು) ಎಡಪಾರ್ಶ್ವಕ್ಕೆ ಅತಿಯಾಗಿ ನುಗ್ಗಿರುವುವು ಅಂಗುಷ್ಠದಲ್ಲಿ ಒಂದು ಪಕ್ಕದಲ್ಲಿ ಸುರುಳಿವೃತ್ತ ಮತ್ತೊಂದು ಭಾಗದಲ್ಲಿ ಶಿರದಿಂದ ಭೂಭಾಗದ ವರೆಗೆ ಇಳಿಜಾರಿನಂತೆ ಕಾಣುವುದು. ಸೂಕ್ಷ್ಮವಾಗಿ ಪರಿಶೀಲಿಸಿದರೆ ಅಂದವಾಗಿ ಜಾಚಿಕೊಂಡಿರುವ ಸ್ತ್ರೀಯರ ಮುಂದಲೆಯಂತೆ ಈ ಲಗ್ನದ ಆಕಾರವು ಕಾಣುವುದು. (ಒಂದು ಕಡೆ ಪಾಲಿ ನಿಂತಿರುವ ಶಂಖ ಅಥವಾ ಚಕ್ರದ ಆಕಾರವೇ ಲಗ್ನದ ಆಕಾರ-

ಈ ಲಗ್ನದಲ್ಲಿ ಜನಿಸಿದವರು ಸ್ವಲ್ಪ ಕುಳ್ಳರಾಗಿಯೂ, ದಪ್ಪವಾಗಿಯೂ ಇರುತ್ತಾರೆ. ಜಾಣ್ಮೆಯ ಮಾತು (Attractive talk) ತಾಳ್ಮೆ, ಕಲಾ ಸಕ್ತಿ, ವಿತರಣಾಗುಣಗಳುಳ್ಳವರಾಗಿರುತ್ತಾರೆ.

ಈ ಲಗ್ನಕ್ಕೆ ಶುಕ್ರನೊಬ್ಬನೇ ಫಲದಾಯಕನು. ರವಿಯೂ ಅಲ್ಪ ಶುಭನು. ಹಾಗು ಶುಕ್ರನೊಡಗೂಡಿದ ಬುಧನು ರಾಜಯೋಗಕಾರಕನು. ಉಳಿದವರು ಅಶುಭ ಫಲದಾಯಕರು.

೧೭೪ನೆಯ ಚಿತ್ರದಲ್ಲಿ ಲಗ್ನಸಂಖ್ಯೆಯ ನೇರವಾಗಿ B ದ ವರೆಗೆ ಇಳಿಜಾರಾಗಿರುವ ಪದರಗಳು ಇರುವುವು. ಅದೇ ಲಗ್ನ ಸಂಖ್ಯೆಯಿಂದ A ವರೆಗೆ ಪದರಗಳು ಅರ್ಧಕವಚಾನಿನಂತೆ (ಮುಂದಲೆಯಂತೆ) ಇರುವುವು. D, C ಮೇಲ್ಭಾಗದ ಪದರಗಳು (ಭೂಭಾಗ) ಅತಿಯಾಗಿ B ಗುರುತಿನ ಶಿರದ ವರೆಗೆ ಇರುವುವು. ಭೂಭಾಗ ಅತಿಯಾಗಿರುವುದನ್ನು ಸೂಚಿಸುವುದು. ಈ ಭೂಮಿಯ ಮೇಲೆ ಒಂದು ಪಕ್ಕಕ್ಕೆ ಒರಗಿ ನಿಂತಿರುವಂತೆ ಸುರುಳಿಯು ಕಾಣುವುದು. ೧೭೫ ನೆಯ ಚಿತ್ರದಲ್ಲಿ ಒಂದು ಪಾರ್ಶ್ವಕ್ಕೆ ಸುರುಳಿ ಆವರ್ತ-ಗಳಿರುವುವು. ಆದರೆ ಕೇಂದ್ರದಲ್ಲಿ ಬೀಳಿಯ ಮತ್ತು ಅರ್ಧಚಂದ್ರಾ-ಕೃತಿಯು ಇರುವುದರಿಂದ ಲಗ್ನದಲ್ಲಿ ಗ್ರಹವಿರುವ ಸೂಚನೆ.

೧೭೬—ಈ ಚಿತ್ರದಲ್ಲಿ ಭೂಭಾಗದ ಮೇಲೆ ಸುರುಳಿಯ ಶಿರ ಒಂದು ಪಕ್ಕಕ್ಕೆ ಒರಗಿ ಮಲಗಿದಂತೆ ಕಾಣುವುದು. ಕೇಂದ್ರದಲ್ಲಿ ಎರಡು ಸುಳಿ ಭಾಗದಂತೆ ಇರುವುದು. ಲಗ್ನದಲ್ಲಿ ಶುಕ್ರಗ್ರಹವಿರುವುದು. ಆದರೆ ರಾಹು ಇದ್ದರೂ ಛಾಯಾಗ್ರಹ; ಪೂರ್ಣ ಗುರುತು ಕಾಣುವುದಿಲ್ಲ.

೧೭೭ನೆಯ ಚಿತ್ರವು ಸ್ವಲ್ಪ ಸಿಂಹಲಗ್ನದಂತೆ ಭಾಸವಾಗುವುದು. ಆದರೆ ಭೂಭಾಗವು ಅತಿಯಾಗಿರುವುದು. ಸುರುಳಿಯ ಪ್ರಥಮವನ್ನು ಪರಿ ಶೀಲಿಸಿದಾಗ ( H V, E ಗುರುತಿನಿಂದ ಮೇಲ್ಭಾಗದಲ್ಲಿ) ಮಾತ್ರೊಂದು ಸುಳಿ ಹೊರಗೆ ಕಾಣುವುದು. ಈ ರೀತಿ ಮಿಲನ ಸುಳಿಗಳು ೨ ಮಾತ್ರ ೩ನೆಯ ಲಗ್ನ (Mithuna and Kanya) ಗಳಲ್ಲಿ ಕಾಣುವುದು. ಮತ್ತು ಪೂರ್ಣ ಸುರುಳಿಯ ಮಧ್ಯಕ್ಕೆ ಸ್ವಲ್ಪ ಕೆಳಗಡೆಯಲ್ಲಿ ಎರಡು ಬಿಳಿ ಗೆರೆ-ಗಳಿರುವುವು. ಇದರಿಂದ ಲಗ್ನದ ಎರಡನೆಯ ಮನೆಯಲ್ಲಿ ಎರಡು ಗ್ರಹ-ಗಳಿರುವುವೆಂದು ವ್ಯಕ್ತವಾಗುವುದು. ( ದ್ವಿತೀಯದಲ್ಲಿ ರಾಹು, ಶು

ಗ್ರಹಗಳಿರುವುವು). ಈ ಬಿಳಿ ಗೆರೆಯಲ್ಲಿ ಒಂದು ಪೂರ್ಣ ಕಾಣುವುದು. (ಶುಕ್ರ) ಮತ್ತೊಂದು ಪಡಸಲು ಛಾಯೆಯಂತೆ (ರಾಹು) ಕಾಣುವುದು.

೧೭೮ ಎಡಗಡೆ ವಾಲಿರುವ ಸಂಕೇತ.

೧೭೯ ಬಲಭಾಗಕ್ಕೆ ಬಾಗಿರುವ ಎಡ ಅಂಗುಷ್ಠ ಕನ್ಯಾಲಗ್ನದ ಸಂಕೇತ.

೧೮೦ ಭೂಭಾಗದ ಮೇಲೆ ಒರಗಿರುವ ಶಂಖದಾಕಾರವುಳ್ಳ ಕನ್ಯಾ ಲಗ್ನ, A ಗುರುತಿನ ಕೆಳಬದಿಯಿಂದ ಒಂದು ಬಿಳಿಯ ರೇಖೆ ಸಾಳಿಯ ಕೇಂದ್ರ ವನ್ನು ಪ್ರವೇಶಿಸಿ ಅಲ್ಪ ಹೊರಗೆ ಸಾಗಿದೆ. ಇದೇ ಲಗ್ನದಲ್ಲಿ (ಕುಜ) ಗ್ರಹ ವಿರುವ ಸಂಕೇತ.

೧೮೦ ನೆಯ ಚಿತ್ರದಲ್ಲಿ A ಎಂಬ ಗುರುತಿಸಿರುವಲ್ಲಿ ಒಂದು ಚೌಕದ ಗುರುತು ಇರುವುದು. ಚೌಕದ ಶಿರಭಾಗದಲ್ಲಿ ನಕ್ಷತ್ರ ಗುರುತು, ಅದೇ ಚೌಕಕ್ಕೆ ಸೇರಿದಂತೆ ಕೆಳಭಾಗದಲ್ಲಿ ತ್ರಿಕೋಣಾಕಾರ, (ನಕ್ಷತ್ರ ಗುರುತಿ ನಿಂದ ತ್ರಿಕೋಣದ ವರೆಗೆ ನೋಡಿದರೆ ದೇವಾಲಯದ ಆಕಾರ ಕಾಣು ವುದು).

ಈ ಚಿಹ್ನೆಯು ವಿಶೇಷ ಯೋಗವುಳ್ಳದಾಗಿರುವುದು. ವ್ಯಕ್ತಿಯು ಧಾರ್ಮಿಕ ಗುಣವುಳ್ಳವನೂ, ಒಳ್ಳೆಯ ಮಾತನದವನೂ, ರಾಜಕಾರಣ ಪಟುವೂ ಮತ್ತು ದಾನ-ಧರ್ಮ, ದೇವಾಲಯ, ವಿದ್ಯಾಸಂಸ್ಥೆಗಳಿಗೆ ಹೆಚ್ಚಾಗಿ ಪ್ರೋತ್ಸಾಹ ನೀಡುವವನೂ, ಈ ವ್ಯಕ್ತಿಯೂ ಸಹ ಅದೇ ರೀತಿ ಗುಣವುಳ್ಳವನೂ, ವಿಶೇಷ ಕೀರ್ತಿಯುಳ್ಳವರೂ ಮತ್ತು (C, D, E ಭಾಗದಲ್ಲಿರುವ ಸಿರಿರೇಖೆಗಳಿಂದ) ಇವನ ಸಂತತಿಯವರು ವಿಶೇಷ ಪಾಂಡಿತ್ಯ, ಕೀರ್ತಿ, ಐಶ್ವರ್ಯನಂತರೂ ಆಗಿರುವರೆಂಬುದನ್ನು ತಿಳಿಸುವುದು.

C, A, B ಗೋದಿರೇಖೆ ಭಿನ್ನವಾಗಿದ್ದರೂ ಮೇಲೆ ವಿವರಿಸಿದ ಶುಭ ಚಿಹ್ನೆಗಳು ವಿಶೇಷ ಯೋಗ, ಸುಖ, ಕೀರ್ತಿಯನ್ನು ನೀಡುವುವು.

ಹಾಗೂ ಗೋಧಿರೇಖೆ ಭಿನ್ನವಾದರೂ ಒಂದಕ್ಕೊಂದು ಸೇರಿದಂತೆ ಇರುವುದು. ಇದರಿಂದ ದ್ವಿತೀಯಾರ್ಧದಲ್ಲಿ A, B ರೇಖೆ ವಿಶೇಷ ಶುಭ ಫಲ ನೀಡಿರುವುದು.

ಅಂಗುಷ್ಠದಲ್ಲಿ ಶಂಖ, ಚತುಷ್ಕೋನ ಪಾರ್ಶ್ವದಲ್ಲಾಗಲಿ ಅಥವಾ ಮಧ್ಯದಲ್ಲಾಗಲಿ ಉದ್ದನೆಯ ಚೌಕ ನಕ್ಷತ್ರಗಳು ಇದ್ದಲ್ಲಿ ವಿಶೇಷ ಭಾಗ್ಯ ಸೂಚಕವಾದುದು.

## ತುಲಾಲಗ್ನ

ಕನ್ಯಾಲಗ್ನದಲ್ಲಿ ಸ್ತ್ರೀಯರ ಮುಂದಲೆಯಾಕಾರ ಜಡಿಯು ಕೊನೆಯು ಭಾಗವು ಇಳಿಬಿಟ್ಟಂತೆ ಇರುವುದು.

ಮೇಲೆ ಹೇಳಿದ ಇಳಿಬಿಟ್ಟ ಹಿಂದಲೆಯ ಭಾಗವು ಕಮಾನಿನಂತೆ ಮೇಲೆದ್ದಿರುವುದು. ಶಿರಭಾಗವು ಕೆಲವುಬಾರಿ ತಟ್ಟೆಯಂತೆ ಮತ್ತೆ ಕೆಲವು ಅಂಗುಷ್ಠದ ಕೇಂದ್ರಭಾಗದಲ್ಲಿ ತ್ರಾಸಿನ ತಟ್ಟೆಯಾಕಾರ ಕಾಣುವುದು. (ಕನ್ಯಾಲಗ್ನದಲ್ಲಿ ವಿವರಿಸಿದ ಇಳಿಜಾರು ಭಾಗವು ಕಡಿಮೆಯಾಗುತ್ತ ಹೋಗುವುದು).

ಈ ಲಗ್ನದಲ್ಲಿ ಜನಿಸಿದರಿಗೆ ಆಂಗವು ಸ್ವಲ್ಪ ಹೆಚ್ಚು ಕಡಿಮೆಯಾಗಿರುತ್ತದೆ. ಶೀತಪ್ರಕೃತಿ, ಚಂಚಲತೆಯುಳ್ಳವರೂ, ಭ್ರಾತೃಗಳಲ್ಲಿ, ಬಂಧುಗಳಲ್ಲಿ ವಿಶ್ವಾಸಾರ್ಹರೂ, ಧಾರಾಳಿಯೂ, ಹಣವಂತರೂ ಆಗಿರುತ್ತಾರೆ. ಉದರ. ವಾಯು, ಮೇಹ, ಶ್ಲೇಷ್ಮ ರೋಗಗಳಿಂದ ತ್ರಪಡುವವರಾಗಿರುತ್ತಾರೆ.

ಈ ಲಗ್ನದಲ್ಲಿ ಜನಿಸಿದವರಿಗೆ ಶನಿಯು ರಾಜಯೋಗವನ್ನು ಕೊಡುವನು. ಚಂದ್ರ, ಬುಧರು ಮಿಲಿತರಾದರೆ (ಸೇರಿದರೆ) ಶುಭಫಲವನ್ನು ಕೊಡುವರು. ಕುಜನಿಂದ ಮಧ್ಯ ಫಲ. ಉಳಿದ ಗ್ರಹಗಳು ಅಶುಭ ಫಲ ನೀಡುವವು. ತುಲಾ ಲಗ್ನದ ೧೮೯ನೆಯ ಚಿತ್ರದಲ್ಲಿ ಚೌಕಾವರಣ (Square root) ದೊಳಗೆ ಮೇಲಿನಿಂದ ಕೆಳಗಿನ ವರೆಗೆ ಭಾಭಾಗದಂತೆ ಕಾಣುವುದು. ಲಗ್ನದ ಸಂಕೇತದಿಂದ ೧೮೯ ಎಂಬ ಗುರುತಿನ ಮೇಲಿರುವ ಅತ್ಯವಾದ ಬಿಳಿ ಗೆರೆಯು ವರೆಗೆ ಮುಂದಿನ ಭಾಗವು ಚೌಕಾವರಣದ ಕಡೆಗೆ ಸಾಗುತ್ತಿ ಸುರುಳಿಗಳ ಕೇಂದ್ರಪದರಗಳು ಮೇಲೆದ್ದು ಕಮಾನಿನಂತೆ ಕಾಣ ವುದು.

ಮೇಲೆ ಹೇಳಿದಂತೆ (೧೭೯ ೪೭+೧೯೦) ೧೯೦ ನೆಯ ಚಿತ್ರ ವು ಕಾಣುವುದು. J ಯಿಂದ L ವರೆಗೆ ಕೇಂದ್ರದಲ್ಲಿರುವ ಪದರಗಳು ಕಮಾನಿನಂತೆ (ತಟ್ಟೆಯಂತೆ) ಕಾಣುವುದು. ಈ ಚಿತ್ರದಲ್ಲಿ A ಯಿಂದ B ವರೆಗೆ ಪ್ರಕಾರ

ವಾದ ಗೋಧಿ (ಯವ) ರೇಖೆ ಇರುವುದರಿಂದಲೂ ಈ ರೇಖೆಯ ಮೇಲೆ F, G, H, I ರೇಖೆಗಳು ಉದ್ದವಾಗಿ ಭಾಗ್ಯ ನೀಡಿರುವುದರಿಂದ ವ್ಯಕ್ತಿಯು ಕೀರ್ತಿ, ಐಶ್ವರ್ಯವಂತನೂ, ಸುಖಿಯೂ ಆಗಿರುತ್ತಾನೆ. ಇವನಿಗೆ ಬಾಲ್ಯದಿಂದಲೂ ಸುಖಜೀವನವಿರುವುದು.

೧೯೦ ಈ ಚಿತ್ರದಲ್ಲಿ ಶಿರಭಾಗವು ವಿಶೇಷವಾಗಿ ಭೂ ಆಕೃತಿಯನ್ನು ಹೊಂದಿರುವುದು. A ಯಿಂದ D ವರೆಗೂ ಭೂಭಾವ ( Earth sign ) ಕಾಣುವುದು. ಮಧ್ಯಭಾಗದಲ್ಲಿ ಮಾತ್ರ ಅಲ್ಪ ವೃತ್ತಾಕಾರವಾಗಿರುವುದು.

D ಸೂಚಕ ಚಿಹ್ನೆಯು ( Arrow mark of D ) ಕೇಂದ್ರದಲ್ಲಿರುವ ಗುಂಡಾದ ಸಣ್ಣ ಆವೃತ್ತವನ್ನು ತೋರಿಸುವುದು. ಇದರಿಂದ ಲಗ್ನದಲ್ಲಿ ಗ್ರಹವಿರುವುದೆಂದು C ಚಿಹ್ನೆಯು ಶಿರದಿಂದ ಕೇಂದ್ರದ ಒಳತನಕ ಭಗ್ನವಾದಂತೆ ಇರುವುದನ್ನು ಸೂಚಿಸುವುದು. ಇದರಿಂದ ಲಗ್ನದಲ್ಲಿರುವ ಗ್ರಹ ಶುಕ್ರಗ್ರಹದಿಂದ ಜೊತೆ ಕೂಡಿರುವುದೆಂದು ತಿಳಿಸುವುದು. ಲಗ್ನದಲ್ಲಿ ಶನಿ, ಕುಜರಿರುವರು.

೧೯೧ ಈ ಚಿತ್ರದಲ್ಲಿ ಆವರ್ತಗಳು ತಟ್ಟೆಯಂತೆ ಗುಂಡಾಗಿರುವುವು. ಕೇಂದ್ರದಲ್ಲಿ ( In centre of the whorl giving a plate sign ) (Cashewnut) ತಟ್ಟೆಯಂತೆ ( ಗೇರುಬೀಜದಂತೆ ) ಕಾಣುವುದು. ಈ ಚಿಹ್ನೆಯು ಭಿನ್ನವಾಗದೆ ಇರುವುದರಿಂದ ಲಗ್ನದಲ್ಲಿ ಗ್ರಹಗಳಿರುವುವೆಂದು ತಿಳಿಸುವುದು. ಲಗ್ನದಲ್ಲಿ ಚಂದ್ರ ಮತ್ತು ರಾಹು ಗ್ರಹಗಳಿರುವುವು. ವ್ಯಕ್ತಿಗೆ ಬಾಲ್ಯದಲ್ಲಿ ಮಾತ್ರ ಮಾತೃವಿಯೋಗ, ಪ್ರಾಯದಲ್ಲಿ ಪತ್ನಿಯೊಡನೆ ಕದನ, ಅಶಾಂತಿ (A ಯಿಂದ B ವರೆಗ ಇರುವ ರೇಖೆಯು ಭಿನ್ನ ಭಿನ್ನವಾಗಿ (Dented lines) ರುವುದರಿಂದ ಆತಂಕದ ಜೀವನ. ಸಂಪಾದನೆ ಅಲ್ಪ, ಶ್ರಮ ಹೆಚ್ಚು, ಅಲ್ಪಾಯುಷ್ಯ. ಶೀತವಾಯುವಿನಿಂದ ತೊಂದರೆ, ೩೦ ಭಾಗ ಮಾತ್ರ ಸುಖ, ೭೦ ಭಾಗ ದುಃಖ, ಶ್ರಮ.

೧೯೨—ಅಂಗುಷ್ಠದ ಪಾರ್ಶ್ವದಿಂದ ಹೊರಗೆ ಎದ್ದು ಕಾಣುವ ಚಕ್ರಾಕಾರವು ತಟ್ಟೆಯಂತೆ ಕಾಣುವುದು. ಕೇಂದ್ರದಲ್ಲಿ ೧೯೧ ನಯ ಚಿತ್ರದ ಕೇಂದ್ರದಲ್ಲಿರುವಂತಹ ಗೇರುಬೀಜದಾಕಾರ ಕಾಣುವುದು.

೧೯೩—ಮಧ್ಯದ ಆವರ್ತಗಳು B ಗುರುತಿನ ಕಡೆಗೆ ಸಾಗಿದಂತೆಲ್ಲಾ ಅರ್ಧಕವಚಾನಿನಂತೆ ಕಾಣುವುದು. A ಯಿಂದ B ವರೆಗೆ ಭೂಪದರಗಳು ಹೆಚ್ಚಾಗುತ್ತ ಇರುವವು.

೧೯೪—ಶಂಖಾಕಾರವು ಭೂಭಾಗದಲ್ಲಿ ಅತಿಯಾಗಿ ಸೇರಿರುವುದು, ಮತ್ತು ಶಿರದಲ್ಲಿರುವ ಆವರ್ತರೇಖೆಗಳು ಭೂಚಿಹ್ನೆಯನ್ನು ಹೆಚ್ಚಾಗಿ ಹೋಲುವುದು. ಸುಳಿ (ಕೇಂದ್ರ) ಮಧ್ಯಭಾಗದಲ್ಲಿ ಬಳಿಗೆರೆಯು ಸಾಗಿರುವುದು. ಅದರ ಒಂದು ತುದಿ ಇಳಿಮುಖವಾಗಿರುವುದು. ಇದರಿಂದ ಪೂರ್ಣ ಅಂಗವಿಲ್ಲದ ಗ್ರಹಲಗ್ನದಲ್ಲಿರುವುದೆಂದು ತಿಳಿಯುವುದು.

## ವೃಶ್ಚಿಕಲಗ್ನ

ತುಲಾಲಗ್ನದಲ್ಲಿ ವಿವರಿಸಿದ ತತ್ವಯಾಕಾರ ( ವೃಶ್ಚಿಕಲಗ್ನದ ಸುತ್ತುಗಳು) ನಶಿಸಿ ಭೂಮಿಯು ಆಕಾರವನ್ನು ಹೋಲುವುದು. ಸುಳಿಯಲ್ಲಿದ್ದ ಗೇರುಬೀಜದಾಕಾರವು ಚೇಳಿನ ಕೋಡಿಯಂತೆ ಕಾಣುವುದು.

ಮತ್ತೆ ಕೆಲವು ಅಂಗುಷ್ಠ ಚಿತ್ರದಲ್ಲಿ ಚೇಳಿನ ಗರ್ಭದಂತೆಯೂ, ಮತ್ತೆ ಕೆಲವು ಭೂಮಿಯಿಂದ ಹೊರಟ ಪದರಗಳು ಭೂಮಿಯ ಕಡೆಗೇ ಬಾಗಿರುವುವು. (ಹೆಚ್ಚಿನವಾಗಿ ಚೇಳಿನಕೊಂಡಿ ಭೂಚಿಹ್ನೆಗಳನ್ನು ಹೊಂದಿರುವುದು. ಭೂಚಿಹ್ನೆ ಪದರಗಳು ಸ್ವಲ್ಪ ಕಮಾನಿನಂತೆ ಕಾಣುವುವು. ಇದೇ ವೃಶ್ಚಿಕಲಗ್ನ).

ಈ ಲಗ್ನಕ್ಕೆ ಶನಿ, ಶುಕ್ರರು ಕ್ರೂರರು. ಗುರುವು ಶುಭನು. ರವಿ, ಚಂದ್ರರು ರಾಜಯೋಗಕಾರಕರು. ಉಳಿದ ಗ್ರಹಗಳು ಅಶುಭಫಲದಾಯಕರು. ಜಾತಕನಿಗೆ ಅಗಲವಾದ ಬಾಯಿ, ತುಟಿ ಸಣ್ಣದಾಗಿರುವುದು, ಹಳದಿ ಕಣ್ಣು, ಸಿಡುಕುಸ್ವಭಾವ, ಸಂಸಾರದಲ್ಲಿ ಆಗಾಗ್ಗೆ ಜಗಳ, ನೀಚವ್ಯಕ್ತಿಗಳಲ್ಲಿ ವಿಶ್ವಾಸವಿಡುವರು, ಯಾವ ವಿದ್ಯೆಯಲ್ಲಿಯೂ ಅಪೂರ್ಣತೆ, ಕೆಟ್ಟ ಚಟಗಳು ಅತಿಯಾಗಿರುವುವು. ಇದರಿಂದ ರೋಗಗಳ ಕಾಟ; ದುಂದುವ್ಯಯ ಮಾಡುವವರು.

೧೯೫ನೆಯ ಚಿತ್ರದಲ್ಲಿ ಶಿರಭಾಗದ ಆವರ್ತಗಳು ಭೂಭಾಗದಿಂದ ಪೊರಟಂತೆ ಕಾಣುವುವು. ಮತ್ತು ಭೂಭಾಗವು ಅತಿ ಹೆಚ್ಚಾಗಿರುವುದು.












ವೃಶ್ಚಿಕ ಲಗ್ನ (೧೯೫-೨೦೨)

ಸುರುಳಿಯ ( Centre of the whorl ) ಕೇಂದ್ರವು ( Shown through the arrow sign) ಚೀಳಿನ ಬಾಲದ ಕೊನೆಯಲ್ಲಿ ಮಡಿಚಿಟ್ಟು-ಕೊಂಡಿರುವ ವಿಷದಕೊಂಡಿಯಂತೆ ಕಾಣುವುದು. ಕೊಂಡಿಯ ಒಂದು ಭಾಗ ಒಳಗಡೆ ಇರುವುದು. ಮತ್ತೊಂದು ತುದಿಯು ಸೇರಿ (Joining) ಕೊಂಡಂತೆ ಕಾಣುವುದು. ಇದರಿಂದ ಲಗ್ನದಲ್ಲಿ ಒಂದು ಗ್ರಹವಿರುವುದೆಂದು ತಿಳಿಯುವುದು,

೯೮ ನೆಯ ಚಿತ್ರವು ಸಹ ಇದೇ ಅಂಗುಷ್ಠದ ಪ್ರತಿ ನಕ್ಷೆ.

೯೬ ನೆಯ ಚಿತ್ರದಲ್ಲಿ ಶಿರ ಮತ್ತು ಭೂಭಾಗವು ಅತಿಯಹಾಗಿರು-ವುದು. ಮಧ್ಯದ ಆವರ್ತವು ಅತಿ ಚಿಕ್ಕದಾಗಿರುವುದು. ಇದು ಚೀಳಿನ ಗರ್ಭದೋಷಾದಿಯಲ್ಲಿ ಕಾಣುವುದು.

೯೭—ಈ ಚಿತ್ರದಲ್ಲಿ ವ್ಯಸ್ತರೇಖೆಗಳೆಲ್ಲಾ ಭೂಮಿಯಿಂದ ಹೊರಟು ನೋಟ್ಪೆಯಾಕಾರವನ್ನು ಹೊಂದಿರುವುದು. ಶಿರದಲ್ಲಿ ಭೂಆಕೃತಿಯು ಕಾಣುವುದು.

೯೯— ಈ ಚಿತ್ರದ ಮಧ್ಯದಲ್ಲಿ ವೃಶ್ಚಿಕದ ಕೊಂಡಿಯಾಕಾರವಿರು ವುದು. ಬಿಳಿಯ ರೇಖೆಯು ಸುಳಿಯೊಳಗೆ ಪ್ರವೇಶಿಸಿದೆ. ಸುಳಿಯ ಕೇಂದ್ರಕ್ಕೆ ಸ್ವಲ್ಪ ಕೆಳಗೆ ಒಂದು ಅತಿ ಸಣ್ಣ ದುಂಡಾದ ಬಿಂದುವಿರುವುದೇ—ಇದು ಲಗ್ನದಲ್ಲಿ ಗುರುವಿರುವ ಸೂಚಕ. ಒಳಗೆ ಪ್ರವೇಶಿಸಿರುವ ಬಿಳಿರೇಖೆ ಮತ್ತೊಂದು ಗ್ರಹದ ಸೂಚನ.

೨೦೦—ಈ ಚಿತ್ರದಲ್ಲಿ O ಯಿಂದ A, B ವರೆಗೆ ಭೂಚಿಹ್ನೆಯು ಇರುವುದು. ಕೇಂದ್ರದಲ್ಲಿ ಕೆಳಗೆ ಮೇಲೆ ಕೊಂಡಿ ರೇಖೆಗಳು ಸಮೀಪಿಸಿವೆ. ಕೇಂದ್ರದಲ್ಲಿ ಕೆಳಗಿನ ಕೊಂಡಿಯ ಕೆಳಗೆ ದುಂಡಾದ ಒಂದು dot ಇದೆ. ಇದೇ ಶುಭಗ್ರಹ ಚಿಹ್ನೆ.

೨೦೧—ಪೂರ್ಣ ಭೂಪದರ ರೇಖೆಗಳು ವೃಶ್ಚಿಕಲಗ್ನದ ಅಂತ್ಯಭಾಗ ಸೂಚಕ. ಕಾರಣ ಮಧ್ಯದಲ್ಲಿ ಸ್ವಲ್ಪ ಕವಾನಿನಂತೆ ಆಗುತ್ತಿರುವುದು.

೨೦೨—ಗೋಧಿರೇಖೆಯು ಮೇಲ್ಪದಿಯಿಂದ ಭೂಪದರಗಳು ಅತಿ ಹೆಚ್ಚಾಗಿರುವುವು. ಕೇಂದ್ರದ ಸುರುಳಿರೇಖೆಗಳು ಭೂಮಿಯ ಮೇಲೆ ಮಲಗಿರುವುವು. ಮಧ್ಯದಲ್ಲಿ ಮಲಗಿರುವ ಚಿಮುಟಾಕಾರಗಳ ಒಂದರ

ಪಕ್ಕದಲ್ಲೊಂದು ಇರುವಂತೆ ಕಾಣುವುದರಿಂದ ಲಗ್ನದಲ್ಲಿ ಎರಡು ಗ್ರಹಗಳಿ-
ರುವ ಸೂಚನೆ.

## ಧನುರ್ಲಗ್ನ

ವೃಶ್ಚಿಕಲಗ್ನದಲ್ಲಿ ವಿವರಿಸುವ ಕೊಂಡಿರೇಖೆಯು ದಾರ ಕಟ್ಟಿರುವ ಬಿಲ್ಲಿನ ಮೇಲ್ಭಾಗ ಕೆಳಭಾಗದ ತುದಿಗಳು, ಬಿಲ್ಲುಗಾರನು ಬಾಣ ತೊಟ್ಟಾಗ ಎರಡು ತುದಿಗಳು ಒಂದರ ಪಕ್ಕದಲ್ಲೊಂದು ಸೇರಿದಂತೆ ಕಾಣುವುದು. ಬೇಳಿನ ಗರ್ಭದೋಷಾದಿ ಕಂಡ ಆವರ್ತರೇಖೆಗಳು ಬಿಲ್ಲಿನ ದ್ವಿತೀಯಾರ್ಧ ಅಥವಾ ಪ್ರಥಮಾರ್ಧ ಭಾಗದಾಕಾರವಾಗಿ ಕಾಣುವುದು.

ಈ ಲಗ್ನದಲ್ಲಿ ಹುಟ್ಟಿದವರ ಹುಬ್ಬುಗಳು ಸುಂದರವಾಗಿ ಖಡ್ಗದಾಕಾರವಾಗಿ ಕಾಣುವುದು. ವ್ಯಕ್ತಿಗಳು ಶೀತಪ್ರಕೃತಿಯುಳ್ಳವರೂ, ದಪ್ಪವಾದ ಹಲ್ಲು, ಅಂಗಗಳು ಮಾಂಸಪುಷ್ಟಿಯಾಗಿರುವುವು. ಧರ್ಮಬುದ್ಧಿ, ಅನ್ಯ ದೇಶದಲ್ಲಿ ವೃತ್ತಿ, ಬಹು ಜನಪ್ರಿಯರು.

ಈ ಲಗ್ನದವರಿಗೆ ಬುಧನು ಪಾಪಿಯು ಶುಕ್ರನು ಕ್ರೂರನು, ರವಿ, ಅಂಗಾರಕರು ಶುಭಪ್ರದರು.

ಚಿತ್ರ, ೨೦೩ ರಲ್ಲಿ ವಿಶಾಲವಾದ ಉದ್ದವಾದ ಸುರುಳಿಗಳು ಕಾಣುವುವು. ಎಡಭಾಗದಿಂದ ನೋಡಿದಾಗ ಬಾಗಿದ ಬಿಲ್ಲಿನಂತೆ ಕಾಣುವುದು.

೨೦೫ ಈ ಚಿತ್ರದಲ್ಲಿ M ಗುರುತಿನ ಮೇಲ್ಗಡೆ ರೇಖೆಗಳ ಸಮೂಹವು ಮೇಲೆ ಸಾಗಿ ಮಧ್ಯದಲ್ಲಿ ಬಿಲ್ಲಿನ ಒಂದು ಕಡೆಯ ಭಾಗದ ಆಕಾರ ಹೊಂದಿರುವುದು. ಮಧ್ಯದಲ್ಲಿ ಒಂದು (Small round in the centre) ಕಾಣುವುದು. ಅದರ ಕೆಳಭಾಗದಲ್ಲಿ ಬಳಿಯ ರೇಖೆ ಹಾದು ಹೋಗಿರುವುದು. ಇದರಿಂದ ಲಗ್ನದಲ್ಲಿ ಎರಡು ಗ್ರಹವಿರುವ ಸೂಚನೆ.

U ದಿಂದ M ವರೆಗೆ ಭಿನ್ನರೇಖೆ ೩೦ನೆಯ ವಯಸ್ಸು ಕಳೆಯುವ ವರೆಗೆ ಜೀವನಕ್ಕೆ ಯಾವ ವಿಧದಲ್ಲೂ ನೆಲೆ ಇಲ್ಲ. M ಬಳಿ ಮತ್ತೊಂದು ಸಹಾಯಕ ರೇಖೆಯು ಸೂರುವಾಗಿರುವುದು. ಇದರಿಂದ ೩ ರಿಂದ ಅಲ್ಪ ಶುಭ. ಸಂತಾನದಲ್ಲಿ ವೃದ್ಧಿ. ೪೫, ೪೬ನೆಯ ವಯಸ್ಸಿನಿಂದ ಶ್ರಿದಳರೇಖೆ

ಹೊರಬೀಳುವುದರಿಂದ ವಿಶೇಷ ಐಶ್ವರ್ಯಪ್ರಾಪ್ತಿ, ಸುಖ, ಶಾಂತಿ, ಗೃಹ, ಭೂಮಿ, ದ್ರವ್ಯ ವೃದ್ಧಿ.

೨೦೬ ಈ ಚಿತ್ರದಲ್ಲಿ ಸುರುಳಿಗಳು ಮುಕ್ಕಾಲುಭಾಗ ಬಾಗಿರುವವು. ಬಿಳಿ ಛಾಯೆಗಳು ಅತಿಯಾಗಿರುವುದರಿಂದ ಲಗ್ನಕ್ಕೆ ಶತ್ರುಗ್ರಹಗಳ ದೃಷ್ಟಿಯಿರುವುದು. ಗೋಧಿರೇಖೆಯು ದಪ್ಪವಾಗಿರುವುದರಿಂದ ಶ್ರಮಜೀವನವಾಗಿರುವುದು.

೨೦೭ ಭೂಭಾಗದಿಂದ ಸುರುವಾದ ಪದರೇಖೆಗಳು ಎಡಭಾಗಕ್ಕೆ ಒಗಗಿದಂತೆ ಮೇಲ್ಗಡೆ ಸಾಗಿರುವವು. ಬಿಲ್ಲಿನ ಮಧ್ಯಭಾಗದ ಹೋಲಿಕೆ, ಛಿನ್ನವಾದ ಗೋಧಿರೇಖೆ: ಅತ್ಯಲ್ಪ ಸುಖ.

೨೦೮ R, T ಪುಚ್ಛಾವರಣ ಚಿಹ್ನೆಯು ಶಿರದಲ್ಲಿ ಭೋಟಿಸ್ಥೆಯನ್ನು ತೋರಿಸುವುದು. ಮಧ್ಯದಲ್ಲಿ ದಾಂಡಾದ ಬಿಂದು. (ಲಗ್ನದಲ್ಲಿ ಗ್ರಹ) C ಯಿಂದ E ವರೆಗೆ ಪದರಗಳು ಸೊಗಸಾಗಿರುವವು. D ಮತ್ತು E ರೇಖೆಗಳು ಮಧ್ಯದಲ್ಲಿ ಸಂಧಿಸಿರುವವು. ಇದರಿಂದ ಪೂರ್ವಾರ್ಧ ಜೀವನ ಅವಿವಾಹಿತ, ಅಶಾಂತಿ. B ಯಿಂದ A ವರೆಗೆ ಇರುವ ರೇಖೆಯು ಅಲ್ಪ ಶುಭವಾಗಿರುವುದು. ೪೦ ನೆಯ ವಯಸ್ಸಿನಿಂದ ಮಧ್ಯಭಾಗ ಶುಭ. K ಮತ್ತು L ರೇಖೆಗಳು ಎದುರು-ಬದುರು ನೋಡುವುದರಿಂದ ಜೀವನ ಅಶಾಂತಿಯಿಂದ ಕೂಡಿರುತ್ತದೆ. ಸುರುಳಿಗಳ ಕೇಂದ್ರದಲ್ಲಿ ಬಿಂದುಚಿಹ್ನೆ ಇರುವುದರಿಂದ ವಿದ್ಯಾ-ವಿನಯಸಂಪನ್ನರೂ, ಸದ್ಗುಣಭರಿತರೂ ಆಗಿರುತ್ತಾರೆ. L, T ಚಿತ್ರದಲ್ಲಿ H ರೇಖೆಯು ಕೇಂದ್ರದಲ್ಲಿ (Center) ಛಿನ್ನವಾಗಿರುವುದು. F, G ರೇಖೆಯು ಒರಟಾಗಿರುವುದು. ಇದರಿಂದ ಶ್ರಮ ಜೀವನವನ್ನು ಹೇಳುವುದು.

## ಮಕರಲಗ್ನ

ಧನುರ್ಲಗ್ನದಲ್ಲಿ ವರ್ಣಿಸಿದ ಧನುಸ್ಸಿನ ಚಿಹ್ನೆಯು ಮಕರಲಗ್ನದಲ್ಲಿ ತ್ರಿಕೋಣದ ಆಕಾರವನ್ನು ಹೊಂದುವುದು. ಕೋನಚಿಹ್ನೆಯು ಭೂಮಿ ಪದರಗಳ ಮೇಲ್ಗಡೆ ಎಡ-ಬಲ ತುದಿಯಲ್ಲಿ ಪೂರ್ಣ ತ್ರಿಕೋಣವಿರುವುದಿಲ್ಲ. ಸುರುಳಿಗಳ ಅಡ್ಡಗಲ ಹೆಚ್ಚಾಗಿರುವುದು. ಕೆಲವು ಅಂಗುಷ್ಠಗಳಲ್ಲಿ

ಎಡಭಾಗವು ಭೂಮಿಪದರದ ಅಂಚಿನಲ್ಲಿ ಕೋನಾಕಾರವಾಗಿರುವುದು. ಕೆಲವು ಅಂಗುಷ್ಠಗಳಲ್ಲಿ ಮೊಟ್ಟೆಯಾಕಾರವಾಗಿರುವುದು. ಆದರೆ ಸುರುಳಿಯು ಒಂದು ಭಾಗದಲ್ಲಿ ದಪ್ಪವಾಗಿಯೂ ಮತ್ತೊಂದು ಭಾಗದಲ್ಲಿ ಸಣ್ಣದಾಗಿಯೂ ಕಾಣುವುದು.

ಈ ಲಗ್ನಕ್ಕೆ ಶುಕ್ರ, ಬುಧರು ಯೋಗಕಾರಕರು. ಈ ಲಗ್ನದಲ್ಲಿ ಹುಟ್ಟಿದ ವ್ಯಕ್ತಿಗಳಿಗೆ ಅಗಲವಾದ ಬಾಯಿ, ಉದ್ದವಾದ ಕೈ-ಕಾಲು, ಕೂದಲು ಕೊಂಚವಿರುವುವು. ವಾಯು, ಪಿತ್ತ ರೋಗಗಳಿಂದ ತೊಂದರೆಗಳು ಇರುವುದುಂಟು.

೨೦೯ನೆಯ ಚಿತ್ರದಲ್ಲಿ ಭೂಪದರದ ಮೇಲ್ಭಾಗದ ಬುಡದಲ್ಲಿ ಅಗಲ, ಮೇಲೆ ಸಾಗುತ್ತಿದ್ದಂತೆ ಸಣ್ಣದಾಗಿ ಕಾಣುವುದು. ಇದರ ಪೂರ್ಣ ಆಕಾರವು ತ್ರಿಕೋಣಾಕಾರವಾಗಿ ಇರುವುದು.

೨೧೦ ಧನುರ್ಲಗ್ನವು ಮುಗಿದು ಮಕರಲಗ್ನ ಸುರುವಾಗಿರುವುದು. ಕೇಂದ್ರ (Center) ದಲ್ಲಿ ಕೋಣಾಕಾರವು ಸುರುವಾಗಿರುವುದು. ತ್ರಿಕೋಣದ ಮೇಲ್ಭಾಗವು ಬಿಲ್ಲಿನ ಆಕಾರದಂತೆ ಬಾಗಿರುವುದು. ಇದರಿಂದ ಮಕರಲಗ್ನ ಸುರುವು ಎಂದು ತಿಳಿಸುವುದು.

೨೧೧ ಭೂಪದರದ ಮೇಲೆ ಒರೆಯಾಗಿಟ್ಟಿರುವ ಒಂದು ಮೊಟ್ಟೆಯಾಕೃತಿ. E ಗುರುತಿನ ಭಾಗದಲ್ಲಿ ಮೊಟ್ಟೆಯು ದಪ್ಪವಾಗಿಯೂ F ಗುರುತಿನ ಭಾಗದಲ್ಲಿ ಸಣ್ಣದಾಗಿಯೂ ಕಾಣುವುದು.

೨೧೨ ಈ ಚಿತ್ರವನ್ನು ನೋಡಿದಾಗ ಭೂಮಿಯ ಮೇಲೆ ಎಡಭಾಗದಲ್ಲಿ ಸುರುಳಿಯ ಆವರ್ತಗಳು ಹೆಚ್ಚಾಗಿ ಚೂಟಿ ತ್ರಿಕೋಣದಾಕಾರವಾಗಿ ಕಾಣುವುದು. ಗೋಧಿರೇಖೆ ಮತ್ತು ಸುಳಿ ಭಿನ್ನವಾಗಿವೆ. ಇದರಿಂದ ವ್ಯಕ್ತಿ ರೋಗಿ, ಶ್ರಮಜೀವಿ.

೨೧೩ ಮತ್ತು ೨೧೪ ಈ ಎರಡು ಚಿತ್ರಗಳಲ್ಲಿಯೂ ಎಡಭಾಗವು ಕೋನಾಕೃತಿಯಾಗಿ ಕಾಣುವುದು. ಈ ಎರಡು ಚಿತ್ರದ ಸುಳಿಯ ಕೇಂದ್ರದಲ್ಲಿಯೂ ಬಿಳಿಯ ಛಾಯೆಯೂ ಸಾಗಿರುವಂತೆ ಕಾಣುವುದು. ಲಗ್ನದಲ್ಲಿ ಗ್ರಹವಿರುವ ಗುರುತು.

## ಕುಂಭಲಗ್ನ

ಮಕರಲಗ್ನದಲ್ಲಿ ವರ್ಣಿಸಿದ ತ್ರಿಕೋಣ ಮೊಟ್ಟೆಯಾಕಾರವು, ಭೂಮಿಯ ಮೇಲೆ ಓರೆಯಾಗಿಟ್ಟ ಮಡಕೆ (Pot) ಯಂತೆ ಕಾಣುವುದು.

ಅಪೂರ್ವ ತ್ರಿಕೋಣವು ಒಂದು ಕಡೆ ವಾಲಿರುವುದು. ಎಡ ಅಥವಾ ಬಲಭಾಗವು ಮಡಕೆಯ ಕುತ್ತಿಗೆಯಂತೆ ಕಾಣುವುದು.

ಮೊಟ್ಟೆಯಾಕಾರದ ಒಂದು ತುದಿಯು ಮಡಕೆಯ ಕಂಠದಾಕಾರ ಹೊಂದಿರುವುದು ಮತ್ತೆ ಕೆಲವೆಡೆಗಳಲ್ಲಿ ಈರುಳ್ಳಿಯಾಕೃತಿ (ಕಾಣುವುದು).

ಈ ಲಗ್ನದಲ್ಲಿ ಜನಿಸಿದವರು ದುಂಡನೆಯ ಮುಖವುಳ್ಳವರೂ, ವೃಥಾ ವ್ಯಯ, ಆದಿ ಅಥವಾ ಅಂತ್ಯದಲ್ಲಿ ಹೆಚ್ಚು ಕಷ್ಟಪಡುವವರು. ಭ್ರಾತೃಗಳುಳ್ಳವರು ಸಂತತಿ ಹೆಚ್ಚಾಗಿರುವುದು. ಶ್ಲೇಷ್ಮರೋಗ ಅಥವಾ ವಾತರೋಗಗಳಿಂದ ದುಃಖಪಡುವವರು, ಪರಸ್ತ್ರೀಯರ ವ್ಯಾಮೋಹಕ್ಕೆ ಒಳಗಾಗಿ ಕಷ್ಟಪಡುವವರು ಆಗಿರುತ್ತಾರೆ.

೨೧೫ ನೆಯ ಚಿತ್ರದಲ್ಲಿ (ಲಗ್ನಸಂಖ್ಯೆ) ೨೧೦ ರಿಂದ ೨೧೫ರ ವರೆಗೆ ಮಡಕೆಯ ತಳಭಾಗ, B ಗುರುತಿನ ಮೇಲೆ ಭೂಪಟಂ ಬಿಟ್ಟು ಮೇಲ್ಗಡೆ ನೋಡಿದಾಗ ಮಡಕೆಯ ಬಾಯಿಯಾಕೃತಿ ಕಾಣುವುದು.

೨೧೬ ನೆಯ ಚಿತ್ರದಲ್ಲಿ ಶಿರಭಾಗವು ಭೂಮಿಯ ಪದರದ ಆಕೃತಿಯನ್ನು ಹೆಚ್ಚಾಗಿ ಹೊಂದಿರುವುದು. ಮೇಲಿನಿಂದ B ವರೆಗೆ ಒಂದು ಪಾರ್ಶ್ವ ಇಳಿಜಾರು, ಉಳಿದ ಭಾಗ ಅರ್ಧ ಮಡಕೆಯಂತೆ ಕಾಣುವುದು. ಆವರೆ (ಸುಳಿ) ಕೇಂದ್ರವು ಸುತ್ತುವರಿದ ಪದರಗಳನ್ನು ಹೊಂದಿರುವುದು. ಇದುಂಬ ಕುಂಭಲಗ್ನದ ಅಂತ್ಯವೆಂದು ನಿರ್ಧಾರ. ಕೇಂದ್ರದಲ್ಲಿ ಎರಡು ಕೊಕ್ಕೆಯಾಕಾರವು ಇರುವುದರಿಂದ ಲಗ್ನದಲ್ಲಿ ಗ್ರಹವಿರುವುದೆಂದು ತಿಳಿಯಲ್ಪಡುವುದು.

೨೧೭ ಈ ಚಿತ್ರದಲ್ಲಿ ಗ್ರಹಗಳ ಸಂಕೇತದ ಗುರುತಿನ ಕಡೆ ಮಡಕೆ ಬಾಯಿಯ ಭಾಗ ಕಾಣುವುದು. ಕೇಂದ್ರದಲ್ಲಿ ದುಂಡಾದ ಸಣ್ಣ ವೃತ್ತವು ಲಗ್ನದಲ್ಲಿ ಶುಭಗ್ರಹವಿರುವ ಸೂಚನೆ. ಇದರ ಕೆಳಗಿನ ವೃತ್ತಗಳು ಭಿನ್ನವಾಗಿರುವುದರಿಂದ ಲಗ್ನದಲ್ಲಿರುವ ಶುಭಗ್ರಹದ ಜೊತೆಯಲ್ಲಿ ಶತ್ರುಗ್ರಹವು




ಕುಂಭಲಗ್ನ (೨೧೫–೨೨೩)

ಇರುವುದೆಂದು ಸೂಚಿಸುವುದು. ವ್ಯಕ್ತಿಯು ವಿದ್ಯಾ-ವಿನಯವಂತ. ಆದರೆ ಸಾಧಾರಣ ಜೀವನ.

೨೧೮ ಈ ಚಿತ್ರದಲ್ಲಿ ನಮಗೆ ಎಡಭಾಗದಲ್ಲಿ ಮಡಕೆಯ ಕಂಠಭಾಗವೂ, ಬಲಭಾಗದಲ್ಲಿ ಅದರ ತಳಭಾಗವೂ ಕಾಣುವುದು. ಈ ಸುರುಳಿಯ ಕೇಂದ್ರ (Center) ದಲ್ಲಿ ಚಿಕ್ಕದಾದ ವೃತ್ತವಿರುವುದು. ಆ ವೃತ್ತದ ಮಧ್ಯದಲ್ಲಿ ಬಿಳಿಯ ಚುಕ್ಕಿ ಕಾಣುವುದು. ಇದರಿಂದ ಈ ಲಗ್ನದ ಅಧಿಪತಿ ಸ್ವಕ್ಷೇತ್ರ ದಲ್ಲಿಯೇ ಇರುವನೆಂದು ತಿಳಿಯುವುದು.

೨೧೯ ಈ ಚಿತ್ರವು ಹೆಚ್ಚಾಗಿ ಮೀನಿನ ಬಾಲದಾಕೃತಿಯನ್ನು ಬಾಣದ ಗುರುತು ಮಾಡಿರುವ ಕಡೆ ಸೂಚಿಸುವುದು. ಒಳ ಆವರ್ತ (ಸುರುಳಿ) ಗಳನ್ನು ನೋಡಿದಾಗ ಬೋರಲು ಹಾಕಿರುವ ಮಡಕೆಯಂತೆ ಕಾಣುವುದು. (ಇದು ಕುಂಭಲಗ್ನದ ಅಂತ್ಯದ ಚಿಹ್ನೆ).

ಇದೇ ಅಂಗುಷ್ಠದ ಚಿತ್ರವನ್ನೇ ಪುನಃ ಕೆಳಭಾಗದಲ್ಲಿ ತೋರಿಸಿರು ವುದು.

೨೨೦ ಸುರುಳಿಗಳ ಆವರ್ತ ಹೆಚ್ಚಾಗಿ ಭೂಮಿಯ ಕಡೆ ಸಾಗಿರು ವುದು. ಕೇಂದ್ರವು ಮೇಲ್ಭಾಗದಲ್ಲಿ ಕಾಣುವುದು.

೨೨೧ ಮಡಕೆಯಾಕಾರ ಎಡಭಾಗದಲ್ಲಿ ಕಂಠಭಾಗ (ಹಾಗೂ ಈರುಳ್ಳಿಯನ್ನು ಉದ್ದವಾಗಿ ೨ ಭಾಗ ಮಾಡಿದ ಆಕಾರ) ಕಾಣುವುದು. ಈ ಚಿತ್ರದಲ್ಲಿ ಗೋಧಿರೇಖೆಯು ಛಿದ್ರ ಛಿದ್ರವಾಗಿರುವುದರಿಂದ ವ್ಯಕ್ತಿ ತನ್ನ ಚಪಲಬುದ್ಧಿಯಿಂದ ಆಗಾಗ್ಗೆ ವೃತ್ತಿಗಳನ್ನು ಕಳೆದುಕೊಂಡು ಸಂಸಾರ, ಸಂತತಿಗಳ ಶೋಕವನ್ನು ಅನುಭವಿಸಿ ೫೦ ನೆಯ (ಕೊನೆಯಲ್ಲಿ ಗೋಧಿರೇಖೆ ಅಲ್ಪ ಶುಭವಾಗಿವೆ) ವಯಸ್ಸಿನಿಂದ ಮಾತ್ರ ಅಲ್ಪ ಶಾಂತಿ-ಸುಖ ಕಾಣು ತ್ತಾನೆ,

೨೨೨ ನೆಯ ಚಿತ್ರದಲ್ಲಿ ಮಧ್ಯದ ಆವರ್ತವು ಎಡಭಾಗದಲ್ಲಿ ಮಾತ್ರ ಮಡಕೆಯ ತಳದಂತೆ ಕಾಣುವುದು. ಬಲಭಾಗವು ಪದರ ರೇಖೆಗಳಿಂದ ಸಮವಾಗಿರುವುದು. ಇದರಿಂದ ಕುಂಭಲಗ್ನ ಕೆಲವೇ ನಿಮಿಷದಲ್ಲಿ ಮುಗಿ ಯುವುದೆಂದು ತಿಳಿಯುವುದು.

## ಮೀನಲಗ್ನ

ಕುಂಭಲಗ್ನದಲ್ಲಿ ವರ್ಣಿಸಿದ ಮಡಕೆಯಾಕೃತಿಯು ಕೇಂದ್ರದಿಂದ ತಳದ ವರೆಗೆ ಸರಿಯಾಗಿ ಅರ್ಧಭಾಗ ನೋಡಿದರೆ ಯಾವ ರೀತಿ ಕಾಣುವುದೋ ಅದೇ ರೀತಿ ಮೀನಲಗ್ನದಲ್ಲಿ ಕಾಣುವುದು. ಕೆಲವು ಅಂಗುಷ್ಠಗಳಲ್ಲಿ ಪಶ್ಚಿಮ ದಲ್ಲಿ ಮುಳುಗುತ್ತಿರುವ ಚಂದ್ರನೋಪಾದಿ ಕಾಣುವದು. ಆದರೆ ಕೇಂದ್ರ ದಲ್ಲಿ ಉದ್ದುದ್ದ ಗೆರೆಗಳನ್ನು ಹೊಂದಿರುವುದು. (ಸುರುಳಿಯು ಪದರರೇಖೆ ಗಳು ಉದ್ದ ಉದ್ದನೆಯದಾಗಿರುವುವು). ಮತ್ತೆ ಕೆಲವು ಅಂಗುಷ್ಠಗಳಲ್ಲಿ ಮೇಲೆದ್ದು ಕಾಣುವ ಚಕ್ರಾಕಾರ, ಪಾರ್ಶ್ವದಿಂದ ನೋಡಿದರೆ ಒಡೆಗ ತೆಂಗಿನಕಾಯಿಯು ಹೋಳಿನಂತೆ ಕಾಣುವುದು.

ಒಂದು ಮೀನಿನ ತಲೆಯು ಬಳಿ, ಮತ್ತೊಂದು ಮೀನು ತಲೆಯಿಟ್ಟು ಮಲಗಿದಂತೆಯೂ, ಕೆಲವು ಅಂಗುಷ್ಠದಲ್ಲಿ ತಲೆಯನ್ನು ಕೇಂದ್ರದಲ್ಲಿಟ್ಟು ಬಾಲವನ್ನು ಕೆಳಗೆ ಇಳಿಬಿಟ್ಟು ಮಲಗಿದಂತೆ ಕಾಣುವುದು. ಈ ಲಗ್ನದ ಅತಿ ಮುಖ್ಯ ಸಂಕೇತವೆಂದರೆ ಅಂಗುಷ್ಠದ ಶಿರಭಾಗದಲ್ಲಿ ಭೂಪದರಗಳು ಅತಿಯಾಗಿ ಕಾಣುವುವು.

ಈ ಲಗ್ನಕ್ಕೆ ಗುರು, ಮಂಗಳರು ಯೋಗಕಾರಕರು. ರವಿ, ಬುಧ, ಶುಕ್ರ, ಶನಿ ಅಶುಭ ಫಲದಾಯಕರು. ಹಾಗೂ ಚಂದ್ರನು ಅಲ್ಪ ಶುಭ ಫಲ ಕೊಡುವನು.

ಈ ಲಗ್ನದಲ್ಲಿ ಜನಿಸಿದವರಿಗೆ ಮೀನಿನ ಹಾಗೆ ಕಣ್ಣು, ಮೂಗು, ತುಟಿ ದಪ್ಪ. ಸ್ತ್ರೀಯರಲ್ಲಿ ಸ್ವಜನರಲ್ಲಿ ಹೆಚ್ಚು ವಿಶ್ವಾಸ. ಶತ್ರುಗಳಿಂದ ತೊಂದರೆ— ಗಳು, ಮೂಲವ್ಯಾಧಿ, ಶ್ಲೇಷ್ಮರೋಗಗಳ ಬಾಧೆ ಇರುವುದು.

೨೨ನೆಯ ಚಿತ್ರದ ಶಿರಭಾಗದಲ್ಲಿ ದಪ್ಪವಾದ ಪದರಗಳು ಕಾಣು ವುವು. ಕೇಂದ್ರದಿಂದ ಹೊರಭಾಗದ ವರೆಗೆ ನೋಡಿದರೆ ( ಸುಳಿಯು ಮಧ್ಯ ದಿಂದ ಭೂಭಾಗದ ವರೆಗೆ ) ಮೀನಿನ ಆಕಾರ ಕಾಣುವುದು. ಮೀನಿನ ತಲೆಯು ಒಳಭಾಗದಲ್ಲೂ ಬಾಲವು ಭೂಮಿಯ ಮೇಲೆ ಇರುವಂತೆಯೂ ಕಾಣುವುದು. ಚಿತ್ರಾಕೃತಿಯ ಆವರ್ತರೇಖೆಗಳು ಭಿನ್ನಭಿನ್ನವಾಗಿರುವುವು. ಇದರಿಂದ ಯೋಗವು ಭಂಗವಾಗಿರುವುದೆಂದು ಶತ್ರುಗ್ರಹಗಳ ಆಕ್ರಮಣ ವೆಂದು ತಿಳಿಯುವುದು. ಸುಳಿಯು ಕೇಂದ್ರಕ್ಕೆ (ನಮಗೆ ಬಲಭಾಗ) ಬಲ

ಭಾಗದಿಂದ ನುಗ್ಗಿರುವ ರೇಖೆಯು ಪ್ರಥಮದಲ್ಲಿ ಕಾಂತಿಯುತವಾಗಿಯೂ, ದ್ವಿತೀಯಾರ್ಧವು ಭಗ್ನವಾಗಿಯೂ ಇರುವುದು. ಇದರಿಂದ ಲಗ್ನದಲ್ಲಿ ಎರಡು (ರವಿ, ಶುಕ್ರ) ಗ್ರಹಗಳಿರುವುವೆಂದು ತಿಳಿಯುವುದು.

೨೨೫ (A ಮತ್ತು B) ಚಿತ್ರದಲ್ಲಿ ಪದರದ ಆವರ್ತಗಳು ಕಿರು ರೇಖೆಗಳಿಂದ ಕೂಡಿವೆ. ಮತ್ತು ಮೀನಿನ ಆಕಾರ ದೂರವಾಗಿ ಭೂಆಕೃತಿಯನ್ನು ಹೊಂದುತ್ತಿರುವುದು. ಇದರಿಂದ ಮೀನಲಗ್ನ ಅಂತ್ಯಗೊಳ್ಳುತ್ತಿರುವುದು.

೨೨೬ನೆಯ ಚಿತ್ರದಲ್ಲಿ ಮೇಲ್ಭಾಗದಿಂದ A, B ಗೆರೆಯ ವರೆಗೆ ಭೂಚಿಹ್ನೆಯು ಕಾಣುವುದು. ಕೆಳಭಾಗದಿಂದ A ಯಿಂದ D ವರೆಗೆ ಪೂರ್ಣವಿಲ್ಲದ ಕಂಠಭಾಗ. ಸುಳಿಯ ಕೇಂದ್ರಕ್ಕೆ ಮೂರು ಟಿಳಿಯ ಛಾಯೆಯಿಂದ ಗೆರೆಗಳು ಕೇಂದ್ರಮೂಲಕ್ಕೆ ಸೇರದೇ ಇರುವುದರಿಂದ ಸಪ್ತಮದಲ್ಲಿ ೩ ಗ್ರಹಗಳು ಇರುವ ಸಂಕೇತ.

೨೨೭ ಅಂಗುಷ್ಠದಿಂದ ಮೇಲೆದ್ದು ಕಾಣುವ ಚಕ್ರಾಕಾರ ಆದರೆ ಮಧ್ಯದಲ್ಲಿ (In the centre) ಉದ್ದನೆಯ ಗೆರೆಗಳಿಂದ ಕೂಡಿರುವುದು. ಇದರಿಂದ ಲಗ್ನದಲ್ಲಿ ಛಾಯಾಗ್ರಹವಿರುವುದೆಂದು ತಿಳಿಸುವುದು.

೨೨೮ (A) ಒಂದು ಮೀನಿನ ಶಿರದಲ್ಲಿ ಮತ್ತೊಂದು ಮೀನು ಬಾಲವನ್ನಿಟ್ಟುಕೊಂಡು ಮೈಥುನ ಹೊಂದಿರುವುದು ಕಾಣುವುದು. ಈ ಚಿಹ್ನೆಯು ಪ್ರಭಾವಯುತ ಮೀನಲಗ್ನದ ಸಂಕೇತ. ೨೨೮(B) ಶಿರದಲ್ಲಿ ಭೂಆವರ್ತ.

೨೨೯ ಮೇಲ್ಭಾಗದಿಂದ L.T ವರೆಗೆ ಭೂಪದರದ ಸೂಚನೆ ಮಧ್ಯದಲ್ಲಿ ಸಮಾನಾಂತರವಾದ ಉದ್ದನೆಯ ಗೆರೆಗಳ ಜೋಡಣೆ. ಮಿಥುನ ಲಗ್ನದ ಸಂಕೇತ.

೨೩೦ ಗೋಧಿರೇಖೆಯ ಮೇಲಿನ ಭೂಚಿಹ್ನೆ (ತನ್ನ ಬಾಲದ ಕಡೆ ನೋಡುತ್ತ)ಯ ಮೇಲೆ ಬಾಲದ ಕಡೆ ನೋಡುತ್ತ ಮಲಗಿರುವ ಮೀನಿನ ಆಕಾರ.

೨೩೧ ಅಂತ್ಯವಾಗುತ್ತಿರುವ ಮೀನಲಗ್ನ R. T ಗುರುತಿನ ಮೇಲ್ಭಾಗ ಭೂಆಕೃತಿಯನ್ನು ಹೆಚ್ಚಾಗಿ ಹೊಂದಿರುವುದು.

೨೩೨ ನೆಯ ಚಿತ್ರವು ೨೨೭ ಯ ಚಿತ್ರವನ್ನು ಹೋಲುವುದು.

೨೩೨A, ೨೩೪A, ೨೩೪B ಈ ಮೂರು ಚಿತ್ರಗಳೂ ಸಹ ೨೨೬ನೆಯ ಆಕೃತಿಯಂತೆ ಕಾಣುವುವು.

# PLATE No. II

## ಅಂಗುಷ್ಠದಲ್ಲಿರುವ ಶಂಕು, ಕಳಸ, ಚಕ್ರಾಕಾರದೊಳಗೆ ಮೂಡಿರುವ ರಹಸ್ಯ ಚಿಹ್ನೆಗಳ ವರ್ಣನೆ ಮತ್ತು ಅವುಗಳಿಂದ ಲಭಿಸುವ ಫಲಾಫಲಗಳು

A ಗೋಧಿರೇಖೆಯು ಈ ರೀತಿ ಇದ್ದರೆ ಮಧ್ಯವಯಸ್ಸಿನಲ್ಲಿ ಅಲ್ಪ ಶುಭಫಲ. B ಹೆಬ್ಬೆರಳಿನಲ್ಲಿರುವ ಶಂಖ, ಚಕ್ರ, ಕಳಸದ ಪದರಗಳು ಈ ರೀತಿಯ ಬಿಂದುಗಳನ್ನು ಹೊಂದಿದ್ದರೆ ವ್ಯಕ್ತಿಯ ಜಾತಕವಲ್ಲಿ ಶುಭ ಫಲದಾಯಕ ಗ್ರಹಗಳು ಪಾಪಗ್ರಹದಿಂದ ಕೂಡಿರುವುದು. ಅಥವಾ ದೃಷ್ಟಿ ಇರುವುದು.

C ಶಂಖ, ಚಕ್ರದ ಆವರ್ತಗಳಲ್ಲಿ ಒಂದೇ ಒಂದು ದುಂಡಾದ ಬಿಂದು ಇದ್ದರೆ ಲಗ್ನಕ್ಕೆ ಸಮೀಪದಲ್ಲಿ ಶುಭಗ್ರಹವಿರುವುದು.

D ಭಿನ್ನ ಭಿನ್ನವಾದ ಶಂಖ, ಚಕ್ರದ ಆವರ್ತಗಳು ಇದ್ದರೆ ವ್ಯಕ್ತಿಗೆ ನಾನಾ ಪಾಪದ್ರವ್ಯ ಲಾಭವಾಗಿ, ಅದೇ ರೀತಿ ವ್ಯಯವಾಗುವುದು. ಉದರ ಮತ್ತು ನರಗಳ ವ್ಯಾಧಿಯು. ಹೆಚ್ಚು ಸಂತತಿಗಳಾದರೂ ಕೆಲವು ಮಾತ್ರ ಉಳಿಯುವುವು. ಸ್ತ್ರೀಯರಿಗೆ ಈ ರೀತಿ ಶಂಖ, ಚಕ್ರ ಹೆಬ್ಬೆರಳಿನಲ್ಲಿದ್ದರೆ ಸಂಸಾರದಲ್ಲಿ ಆಗಾಗ್ಗೆ ಕಲಹ, ಅಶಾಂತಿ ಉಂಟಾಗುವುವು.

E ( Dented lines ) ಕಂತುರಾದ ರೇಖೆಗಳು ಗೋಧಿರೇಖೆ ಈ ರೀತಿ ಇದ್ದರೆ ಅತಿಯಾದ ಕಷ್ಟದಿಂದ ಜೀವನ ಸಾಗಿಸಬೇಕಾಗುವುದು. ಸಂಸಾರ, ಸಂತತಿ, ಶೋಕ ಅನುಭವಿಸಬೇಕಾಗುವುದು.

F ಈ ರೀತಿಯ ಗೋಧಿರೇಖೆಯುಳ್ಳವರು ಚಂಚಲಗುಣವುಳ್ಳವರೂ, ಮಾನಸಿಕ ಶ್ರಮದನ್ನು ಅತಿಯಾಗಿ ಅನುಭವಿಸುವವರೂ ಸುಖ-ದುಃಖಗಳು

ಶುಕ್ಲಪಕ್ಷ, ಕೃಷ್ಣಪಕ್ಷದಂತೆ ಇರುವುವು. ಆದರೂ ಇವರುಗಳು ಸೊಗಸಾದ ವಸಾತುಗಾರರು, ಲಾಟರಿ, ಜೂಜು, ಕಲಾಕೃತಿಗಳು ಇವುಗಳಲ್ಲಿ ಅತಿಯಾದ ಆಸಕ್ತಿಯುಳ್ಳವರು.

G ಸೊಗಸಾಗಿಯೂ, ಉದ್ದವಾಗಿಯೂ ಈ ಚಿತ್ರದಲ್ಲಿರುವಂತೆ ಗೋಧಿರೇಖೆಯು ಇದ್ದರೆ, ಆ ವ್ಯಕ್ತಿಗೆ ವಿಶೇಷ ಐಶ್ವರ್ಯ, ಕೀರ್ತಿ, ಉತ್ತಮಸಂತತಿ, ಸಂಸಾರ ಮುಂತಾದ ಸಕಲ ಐಶ್ವರ್ಯವೂ ಲಭಿಸುವುದು.

೧. ಹೆಬ್ಬೆರಳಿನಲ್ಲಿರುವ ಶಂಖ, ಚಕ್ರದ ಮೂಲ (ಮಧ್ಯ) ದಲ್ಲಿ ಈ ಗುರುತಿ ಇದ್ದ ಪಕ್ಷದಲ್ಲಿ ಲಗ್ನದಲ್ಲಿ ಶುಭಗ್ರಹ ಅಥವಾ ಲಗ್ನಕ್ಕೆ ಶುಭಗ್ರಹಗಳ ವೀಕ್ಷಣೆ ಇರುವುದೆಂದು ತಿಳಿಯುವುದು.

೨. ದುಂಡಾದ ವೃತ್ತದಲ್ಲಿ ಸಣ್ಣದಾದ ದುಂಡಾದ ಮತ್ತೊಂದು ಗುರುತು ಲಗ್ನದಲ್ಲಿರುವ ಶುಭಗ್ರಹದ ಸಂಕೇತ.

೩. ಎರಡು ಗೀಟು ಕೇಂದ್ರದಲ್ಲಿದ್ದರೆ ಲಗ್ನದಲ್ಲಿ ಎರಡು ಗ್ರಹವಿರುವುವೆಂದು ಸೂಚಿಸುವುದು.

೪. ಶಂಖದ ಕೇಂದ್ರದಲ್ಲಿ ಅಡ್ಡಗೆರೆ ಇದ್ದರೆ ಲಗ್ನದಲ್ಲಿ ಕುಜ ಅಥವಾ ರಾಹು ಗ್ರಹವಿರುವ ಸಂಕೇತ. (ಕೇಂದ್ರದ ಹಿಂದೆ ಮುಂದೆ ಈ ಗುರುತು ಇದ್ದರೆ ಲಗ್ನಕ್ಕೆ ಹಿಂದೆ ಅಥವಾ ಮುಂದಿನ ಮನೆಯಲ್ಲಿ ಗ್ರಹಗಳಿರುವುವೆಂದು ಸೂಚಿಸುವುದು).

೫. ಶಂಖದ ಮಧ್ಯದಲ್ಲಿ ಇಜ್ಜೋಡಿ ಆಕಾರ ಚಿತ್ರದಲ್ಲಿರುವಂತೆ ಕಂಡರೆ ಲಗ್ನದಲ್ಲಿ ಎರಡು ಗ್ರಹಗಳು ಇರುವುವೆಂದು ಅವು ಭಿನ್ನವಾಗಿರದೆ, ಕತ್ತರಿಸದೆ ಇದ್ದರೆ ಮಿತ್ರಗ್ರಹಗಳೆಂದು ತಿಳಿಸುವುದು.

೬. ಗೇರುಬೀಜದ ಆಕಾರವು ಮಧ್ಯದಲ್ಲಿದ್ದರೆ ಶುಕ್ರಗ್ರಹದ ಸಂಕೇತವಾಗಿರುತ್ತದೆ.

೭. ರಾಹು ಅಥವಾ ಕೇತು ಗ್ರಹ ಲಗ್ನದಲ್ಲಿರುವ ಸಂಕೇತ.

೮. ಅಂಗಾರಕ ಅಥವಾ ರವಿ ಗ್ರಹದ ಸಂಕೇತ.

೯. ಲಗ್ನದ ಹೊರಭಾಗದಲ್ಲಿ ವ್ಯಯ ಅಥವಾ ದ್ವಿತೀಯದಲ್ಲಿ ಗ್ರಹ ಇರುವ ಸಂಕೇತ.

೧೦. ಮತ್ತು ೧೧. ಲಗ್ನದಲ್ಲಿ ರಾಹು, ಶನಿ ಅಥವಾ ಕುಜಗ್ರಹ ಇರುವ ಸಂಕೇತ.

೧೨. ವಿರಹದ ಜೀವನ, ಪತಿಗೆ ವಿಪತ್ತು, ಸಂಪತ್ತಿಗಳ ವಿಯೋಗ ಸೂಚಿಸುವ ಸೆಗ್ಗುರುತು.

೧೩ ಮತ್ತು ೧೪. ದಾಂಪತ್ಯಜೀವನದ ಅತೃಪ್ತಿ. ಶತ್ರುಗಳ ಕಿರು ಕುಳದ ಸಂಕೇತ.

೧೫. ಶ್ರಮದಿಂದ ಜೀವನ. ದುಡಿಮೆ ಹೆಚ್ಚು. ಲಾಭ ಅತ್ಯಲ್ಪ. ಭಂಡಜೀವನ.

೧೬. ಕೇಂದ್ರಕ್ಕೆ ಸರ್ಪಪ್ರವೇಶ-ಸಂತಾನಭಂಗ, ವಂಶವೃದ್ಧಿಗೆ ಭಂಗ, ಪತಿಗೆ ವಿಪತ್ತು ಅಥವಾ ಪಂಚಮ-ಸಪ್ತಮದಲ್ಲಿ ಶತ್ರುಗ್ರಹಗಳ ಮಿಲನ.

೧೭. ಪ್ರೀತಿ-ಪ್ರೇಮಗಳಿಗೆ ಧಕ್ಕೆ. ಈ ಚಿಹ್ನೆಯುಳ್ಳವರು ಮೊದಲು ಪ್ರೀತಿಸಿ ವಿವಾಹಕ್ಕೆ ನಿಶ್ಚಯಿಸಿಕೊಂಡಿದ್ದು ಕೊನೆಗೆ ಒಬ್ಬರಿಗೊಬ್ಬರು ದೂರವಾಗುತ್ತಾರೆ.

೧೮. ಭೂಮಿಯ ಮೇಲೆ ಈ ಚಿಹ್ನೆ ಕಂಡರೆ ವಿನಾಶವಾದ ಪತ್ನಿಯನ್ನು ಕೆಲವು ದಿನಗಳ ವರೆಗೆ ತೋರಿಸುವವರು. ಆದರೆ ಈ ವಿವಾಹವು ಹಿರಿಯರ ಬಲಾತ್ಕಾರಕ್ಕಾಗಿ ಆಗಿರಲೂ ಸಾಧ್ಯ.

೧೯. ಗೋಧಿರೇಖೆಯ ಮೇಲೆ ಈ ಚಿಹ್ನೆಯು ವಿಶೇಷವಾಗಿ ಕಾಣುವುದು. ಇದರಿಂದ ವ್ಯಕ್ತಿಯು ಬಾಲ್ಯದಲ್ಲಿಯೇ ಮಾತೃವಿಯೋಗ ಅನುಭವಿಸುವ ಸಾಧ್ಯತೆ ಇದೆ.

೧೯-೨೦. ಗೋಧಿರೇಖೆ ಬಿಟ್ಟು ಉಳಿದೆಡೆ ಎಲ್ಲಿ ಈ ಚಿಹ್ನೆ ಬಂದರೂ ವ್ಯಕ್ತಿಗೆ ಪೆತ್ತು ಶತ್ರುಗಳಿರುತ್ತಾರೆ ಎಂದು ಸೂಚಿಸುತ್ತದೆ.

೨೦. ಲಗ್ನದಲ್ಲಿ ಛಾಯಾಗ್ರಹವಿರುವ ಸಂಕೇತ.

೨೨. ಚೌಕುರೇಖೆಗಳು ವ್ಯಕ್ತಿಯ ಕೀರ್ತಿ, ಐಶ್ವರ್ಯ ಸವರಾಜ ಸೇವೆ ಮತ್ತು ಇತರರ ಮೇಲಿನ ಆಧಿಪತ್ಯವನ್ನು ಸೂಚಿಸುವುದು.

೨೩. ತೆಂಗಿನಮರ-ರಾಜ ಅಥವಾ ಮಂತ್ರಿ ಅಥವಾ ರಾಜಕೀಯ ಗಣ್ಯವ್ಯಕ್ತಿಗಳನ್ನಾಗಿ ಮಾಡುವುದು.

೨೪-೨೫. ಪತ್ರ ಪುಷ್ಪ ರಾಜಯೋಗ. ರಾಜಕೀಯ ಗಣ್ಯವ್ಯಕ್ತಿ. ಸರಕಾರಸೇವಾನಿರತ.

೨೬. ವ್ಯಕ್ತಿಯು ಸರಕಾರಕ್ಕಾಗಿ ದೇವಾಲಯ, ಸಾಲುಮರ, ವಿದ್ಯಾಸಂಸ್ಥೆಗಾಗಿ ಭವನಗಳ ಕಟ್ಟುವಿಕೆಯನ್ನು ಸೂಚಿಸುವುದು.

೨೭. ಹೆಬ್ಬೆರಳ ಪ್ರಥಮ ಭಾಗದಲ್ಲಿ ಈ ಚಿಹ್ನೆ ಇದ್ದರೆ ವ್ಯಕ್ತಿಯು ತಪ್ಪದೆ ರಾಜಕಾರಣಪಟುವಾಗಿ ಅದ್ಭುತಕೀರ್ತಿ ಸಂಪಾದಿಸುವನು.

೨೮. ಶಂಖ. ಚಕ್ರದ ಮಧ್ಯಬಿಂದುಗಳ ಅಕ್ಕ-ಪಕ್ಕದಲ್ಲಿ ಉದ್ದನೆಯ ಗೆರೆಗಳು ರಾಜಯೋಗಗಳನ್ನು ಕೊಡುವುದು.

೨೯. ಈ ಚಿಹ್ನೆಯು ಗೋಧಿರೇಖೆಯ ಮೇಲೆ ಕಾಣುವುದು. ಇದರಿಂದ ೩೦, ೩೫ನೆಯ ವಯಸ್ಸಿನ ನಂತರ ಸಂತಾನಪ್ರಾಪ್ತಿ; ಹಾಗೂ ಹೆಣ್ಣುಮಕ್ಕಳು ಹೆಚ್ಚಾಗುವುವು.

೩೦. ಸಂತಾನಭಾಗ್ಯ ಭಂಗವಾಗಿರುತ್ತದೆ; ವಂಶವೃದ್ಧಿ ಇಲ್ಲ.

೩೧. ಗೋಧಿರೇಖೆಯ ಮೇಲೆ ಈ ಚಿಹ್ನೆ (೨೯ನೆಯ ಚಿಹ್ನೆ) ಇದ್ದರೂ ಅಡ್ಡಗೆರೆಯು ಭೇದಿಸಿ ತ್ರಿಕೋಣವನ್ನು ಉಂಟುಮಾಡಿರುವುದರಿಂದ ಗಂಡುಮಕ್ಕಳುಗಳು ಹೆಚ್ಚಾಗಿ ಹುಟ್ಟುವರು.

೩೨. ವ್ಯಕ್ತಿಗೆ ಇದ್ದ ಐಶ್ವರ್ಯ ಶತ್ರುಗಳಿಂದ, ಸ್ವಜನರ ಕಿರುಕುಳದಿಂದ ವ್ಯಯವಾಗುವುದು. ಹಾಗೂ ಸಂಸಾರದಲ್ಲಿ ಅಶಾಂತಿ ಆಗಾಗ್ಗೆ ತಲೆದೋರುವುದು.

೩೩. ಗೋಧಿರೇಖೆಯ ಪ್ರಥಮದಲ್ಲಿ ದ್ವಿತೀಯ ಭಾಗದಲ್ಲಿ ಭಿನ್ನ ಭಿನ್ನವಾಗಿದ್ದಲ್ಲಿ ವ್ಯಕ್ತಿಯು ಬಾಲ್ಯದಿಂದ ಪ್ರಾಯದ ಕೆಲವು ವರ್ಷಗಳವರೆಗೆ ಸುಖವನ್ನೂ ನಂತರ ಕಷ್ಟವನ್ನೂ ಅನುಭವಿಸುವನು.

೩೪. ಗೋಧಿರೇಖೆಯು ಸುರುವಿನಿಂದ ಮತ್ತೊಂದು ರೇಖೆಯ ಸಹಾಯವನ್ನು ಪಡೆದಿರುವುದು. ಮಧ್ಯದಲ್ಲಿ ಗೋಧಿಯ ಆಕಾರ ಹೊಂದಿರುವುದು. ಅಂತ್ಯದಲ್ಲಿ ಅಂಕುಡೊಂಕಾಗಿರುವುದು. ಇದರಿಂದ ವ್ಯಕ್ತಿಯು ಬಾಲ್ಯದಲ್ಲಿ ಬಂಧುಗಳ ಸಹಾಯವನ್ನು ಪರಸ್ಥಳ ಸೇರಿ ಪಡೆದು, ಮಧ್ಯ ವಯಸ್ಸಿನಲ್ಲಿ ವಿಶೇಷ ಐಶ್ವರ್ಯ, ಗೃಹ, ದ್ರವ್ಯಗಳನ್ನು ಪಡೆದು ನಂತರ ಕಷ್ಟಪ್ರಾಪ್ತಿಯಾಗಿ, ಕ್ರಮೇಣ ಐಶ್ವರ್ಯ ಸುಖವೆಲ್ಲ ನಶಿಸಿಹೋಗುವುದು. ಪತ್ನಿಯು ಮುತ್ತೈದೆಯಾಗಿ ( ಪತಿಗೆ ಮೊದಲೇ ) ಪ್ರಾಣಬಿಡುವಳು.

೩೫. ಸುರುವಿನಲ್ಲಿ ಈ ರೇಖೆಯು ಭಿನ್ನವಾಗಿಯೂ ನಕ್ಷತ್ರದ ಗುರುತು (ಅಥವಾ ಗುಣಾಕಾರ ಚಿಹ್ನೆ ಹೊಂದಿದೆ) ಹೊಂದಿರುವುದು. ನಂತರ ಸಾಮಾನ್ಯವಾಗಿ ಸುರುವಾಗಿ ಸ್ವಲ್ಪ ದೂರ ಸಾಗಿದ ನಂತರ ಗೋಧಿಯಾಕಾರ ಹೊಂದಿದೆ. ಕೊನೆಕೊನೆಗೆ ಅನೇಕ ಸಹಾಯಕ ರೇಖೆಗಳು ಸೇರಿ ಎರಡು—ಮೂರು ಗೋಧಿ ಕಾಳಿನ ಆಕಾರ ಪಡೆದಿರುವುದು, ಇದರಿಂದ ವ್ಯಕ್ತಿಯು ಬಾಲ್ಯದಲ್ಲಿ ಪೋಷಕರರನ್ನು ಕಳೆದುಕೊಂಡು ಅಪ್ರಯೋಜಕವಾಗಿ ಸ್ಥಳಗಳನ್ನು ಸಂಚರಿಸಿ ನಂತರ ಸಾಮಾನ್ಯ ವ್ಯಕ್ತಿಶೀಲನಾಗಿ ದಿನ ದಿನಕ್ಕೂ ಐಶ್ವರ್ಯ ಪಡೆದು, ಅಂತ್ಯದಲ್ಲಿ ಅನಾಯಾಸವಾಗಿ ಪರರ ಆಸ್ತಿ, ಐಶ್ವರ್ಯವೂ, ನಾನಾ ಸ್ತ್ರೀಸುಖವೂ ಪ್ರಾಪ್ತವಾಗಿ ಮಹತ್ತರ ಕೀರ್ತಿ, ಸುಖ, ಐಶ್ವರ್ಯದಿಂದ ಜೀವನ ಸಾಗಿಸುವನು.

೩೬. ಮೀನಿನ ಆಕಾರವಾದ ಗೋಧಿರೇಖೆಯು ವ್ಯಕ್ತಿಯ ಹಸ್ತದಲ್ಲಿದ್ದರೆ ಆ ವ್ಯಕ್ತಿಯ ನಕ್ಷತ್ರವು ಚರರಾಶಿಯಾಗಿ (Movable sign) ಸಾಗಿರುತ್ತದೆ. ಅಥವಾ ಧನಾಧಿಪತಿಯು ಚರರಾಶಿಯಲ್ಲಿರಲು ಸಾಧ್ಯ. ಈ ಚಿಹ್ನೆಯುಳ್ಳ ವ್ಯಕ್ತಿಯು ( ಗೋಧಿರೇಖೆ ಮೀನಿನಂತೆ ಇದ್ದರೆ ) ಸುಲಭೋಪಾಯದಲ್ಲಿ ದ್ರವ್ಯಾರ್ಜನೆ ಮಾಡುವನು. ಪುಣ್ಯಕ್ಷೇತ್ರದರ್ಶನ, ಗುರು—ಹಿರಿಯರ ಸೇವೆಮಾಡುವವನೂ ಚಂಚಲಗುಣವುಳ್ಳವನೂ ಸುಲಭವಾಗಿ ಸಂಪಾದಿಸಿ, ಅತಿ ಸುಲಭವಾಗಿ ವ್ಯಯಮಾಡುವವನೂ ಆಗಿರುತ್ತಾನೆ.

೩೭–೩೮. ಈ ರೀತಿಯ ಒರಟು ಗೋಧಿರೇಖೆ ಇದ್ದರೆ ಒರಟು ಸ್ವಭಾವ, ಅಲ್ಪವಿದ್ಯಾ, ಸಂಸಾರದಲ್ಲಿ ಅಶಾಂತಿ, ಹಾಗೂ ವಿವಾಹವಾಗುವುದೇ ಶ್ರಮ. ಕಷ್ಟಾರ್ಜಿತದಿಂದ ದ್ರವ್ಯಪ್ರಾಪ್ತಿ, ಬರುವ ಲಾಭ ದಿನ ಖರಿಗೇ ಸಾಕಾಗುವುದಿಲ್ಲ.

೩೯. ಬಾಲ್ಯದಲ್ಲಿ ಸಾಮಾನ್ಯಸುಖ ಮಧ್ಯವಯಸ್ಸಿನಲ್ಲಿ ಸತಿ–ಸುತರಿಗೆ ಕಷ್ಟ, ದ್ರವ್ಯಹಾನಿ. ಪರಸ್ಥಳ ಪ್ರವಾಸ. ಅಂತ್ಯದಲ್ಲಿ ಸುಖ, ಐಶ್ವರ್ಯ ಪ್ರಾಪ್ತಿ.

೪೦. ಸರಳ ಜೀವನ, ಕಷ್ಟ, ಸುಖ ಸಮಭಾಗವಾಗಿರುತ್ತದೆ.

೪೧. ಸುರುವಿನಿಂದಲೂ ಅನೇಕ ರೇಖೆಗಳು ಕೂಡಿ ಗೋಧಿಯಾಕಾರ ಅತಿಯಾಗಿ ಮೂಡಿದ್ದರೆ ವ್ಯಕ್ತಿಯು ಜನಿಸಿದ ಕಾಲದಿಂದಲೂ ಮಹತ್ತರ ಐಶ್ವರ್ಯವನ್ನೂ, ಪ್ರಾಯಕ್ಕೆ ಬಂದಾಗ ನಾನಾ ವಾಹನ ಸುಖ, ಕೀರ್ತಿ, ಉಪಪತ್ನಿಯರನ್ನು ಪಡೆಯುವವನಾಗಿಯೂ, ದಾನಧರ್ಮಪರಾಯಣನಾಗಿಯೂ ಶೋಭಿಸುವನು.

೪೨. ಸುರುವಿನಲ್ಲಿದ್ದ ಪಿತ್ರಾರ್ಜಿತವಾದ ಐಶ್ವರ್ಯವನ್ನು ಮಧ್ಯ ವಯಸ್ಸಿನಲ್ಲಿ ಕಳೆದುಕೊಳ್ಳುವನು. ಕೊನೆಕೊನೆಗೆ ದುಷ್ಟ–ವ್ಯಾಧಿಗಳಿಗೆ ತುತ್ತಾಗುವನು.

೪೩. ಹೆಬ್ಬೆರಳಿನಲ್ಲಿರುವ ಶಂಖ, ಚಕ್ರ, ಕಳಸ ಚಿಹ್ನೆಗಳು ಎಡ–ಬಲದಲ್ಲಿ ಈ ರೀತಿ ಸೊಗಸಾದ ಉದ್ದನೆಯ ರೇಖೆಗಳು ಮೂಡಿದ್ದರೆ ವ್ಯಕ್ತಿಯು ಧನಿಕನೂ, ಪರೋಪಕಾರಿಯೂ, ಪ್ರಭುತ್ವಾ ಆಗಿರುತ್ತಾನೆ.

[ಗೋಧಿರೇಖೆಯನ್ನು ಈ ರೀತಿಯ ರೇಖೆಯು ಛೇದಿಸಿದ್ದರೆ ವ್ಯಕ್ತಿ ಸರ್ವವಿಧದಲ್ಲೂ ಕಷ್ಟವನ್ನು ಅನುಭವಿಸುವನು.]

೨೧ ನೆಯ ಗುರುತಿನ ಚಿತ್ರಭಾಗದಲ್ಲಿ ವ್ಯಕ್ತಿಯೊಬ್ಬರ ಹೆಬ್ಬೆರಳಿನಲ್ಲಿರುವ ಮಾಲಿಕಾರೇಖೆಯನ್ನು ಅಚ್ಚುಹಾಕಿಸಿರುವೆವು. ಈ ಚಿಹ್ನೆಯು ಸುರುವಿನಲ್ಲಿ ಅಲ್ಪ ಶತ್ರುರೇಖೆಗಳಿಂದ ಭಿನ್ನವಾಗಿದೆ. ನಂತರ ಅನೇಕ ಮಣಿಗಳನ್ನು ಹೊಂದಿರುವುದು. ಇದರಿಂದ ವ್ಯಕ್ತಿಯು ೨೭ ನೆಯ ವಯಸ್ಸಿನ ವರೆಗೆ ಅನೇಕ ಕಷ್ಟಗಳನ್ನು ಜಯಿಸಿ ನಂತರ ದಿನದಿನಕ್ಕೆ ಭಾಗ್ಯ–ಸುಖವನ್ನು ಪಡೆಯುವನು.

## ಅಂಗುಷ್ಠದಲ್ಲಿರುವ ರೇಖೆಗಳು ಮತ್ತು ಅವುಗಳ ವರ್ಣನೆ




೧ ರಿಂದ ೨ರ ವರೆಗೆ ಇರುವ [St 1 to 2 End] ರೇಖೆಗೆ ಗೋಧಿ ರೇಖೆ, ಯವರೇಖೆ, ಅನ್ನರೇಖೆ ಎಂದೂ ಕರೆಯುವರು.

೯. ಕೇಸರರೇಖೆ.

೭. ಮಾಲಿಕಾರೇಖೆ [ಮಣಿಹಾರ ಎಂದೂ ಕರೆಯುವರು].

೧೦. ಮಂಗಳರೇಖೆ [ರಿಪು, ಶತ್ರು ರೇಖೆ].

೩. ಮಧುರ.

೪. ಮಂದಾರ.

೫. ಪುನಃ [ಮನಸ್ಸನ್ನು ಸೂಚಿಸುವ ರೇಖೆ].

೬. ರತಿರೇಖೆ [ಪುರುಷನಿಗೆ ರತಿರೇಖೆ, ಸ್ತ್ರೀಯರಿಗೆ ಪತಿರೇಖೆ ಎಂದು ತಿಳಿಯುವುದು].

೮. ಸಣ್ಣ ಸಣ್ಣ ತುಂತುರಿನಂತೆ ಕಾಣುವ ರೇಖೆಗಳನ್ನು ತಾರಾ ರೇಖೆಗಳೆಂದು ಪರಿಗಣಿಸಿದೆ.

೧ ರಿಂದ ಗೋಧಿರೇಖೆ, ೮ ತಾರಾರೇಖೆ, ೭ ಮಾಲಿಕಾರೇಖೆ, ೬ ರತಿ ರೇಖೆ, ೧೦ ಅಂಗಾರಕರೇಖೆ, ೯ ಕೇಸರರೇಖೆಗಳು ಅತಿ ಮುಖ್ಯವಾದುವು. ಇವು ಸಾಮಾನ್ಯವಾಗಿ ಎಲ್ಲಾ ಹಸ್ತದ ಅಂಗುಷ್ಠದಲ್ಲೂ ಕಾಣಬಹುದು.

ಈ ರೇಖೆಗಳಿಂದಲೇ ವ್ಯಕ್ತಿಗಳ ಭವಿಷ್ಯ ರೂಪಿಸಬಹುದು. ಉಳಿದ ರೇಖೆಗಳು ಅತಿ ದುರ್ಬಲವಾಗಿ ಕಾಣುವುವು. ಆದ ಪ್ರಯುಕ್ತ ಮುಖ್ಯ ರೇಖೆಗಳನ್ನು ಅನುಸರಿಸಿ ಪ್ರಾಯೋಗಿಕವಲ್ಲಿ ವಿವರಿಸಿದೆ.

## ಗೋಧಿರೇಖೆ [ Line of wheat or Line of Rice ]

೧ ರಿಂದ ೨ ಗೋದಿರೇಖೆ, ಅನ್ನರೇಖೆ ಎಂದು ಈ ರೇಖೆಯನ್ನು ಕರೆಯುವರು. ವ್ಯಕ್ತಿಗಳಿಗೆ ಈ ರೇಖೆ ಇದ್ದರೂ ಅನ್ನ, ಆಹಾರ ಪಡೆಯುವರು ಭಿನ್ನವಾಗಿದ್ದರೂ ಸಹ ಸುಖಿಸುವರು.

ಈ ರೇಖೆ ಗೋಧಿಯಾಕಾರವಾಗಿ ಕಾಂತಿಯುತವಾಗಿದ್ದರೆ ವ್ಯಕ್ತಿಯು ಸುಖಜೀವನ ಸಾಗಿಸುವನು; ಅಂದರೆ ನಿರಾಯಾಸವಾದ ಸಂಪಾದನೆ.

ಹೂವಿನ ಆಕಾರವಾಗಿದ್ದರೆ ವ್ಯಕ್ತಿಗೆ ಬಾಲ್ಯದಲ್ಲಿ ಶ್ರಮ, ಕಷ್ಟಗಳು ಯೌವನ, ಮುಪ್ಪಿನಲ್ಲಿ ವಿಶೇಷ ಸುಖ, ಐಶ್ವರ್ಯ.

ಮೂರು ದಳವುಳ್ಳದ್ದಾಗಿದ್ದರೆ ಅನಾಯಾಸವಾಗಿ ಪರರ ಆಸ್ತಿಯನ್ನು ಕಾಣಿಕೆಯಾಗಿ ಪಡೆಯುವನು.

ಸುರುವಿನಲ್ಲಿ ಭಿನ್ನವಿದ್ದು ಮಧ್ಯದಲ್ಲಿ ಎರಡು ಉಪರೇಖೆಯ ಸಹಾಯ ಹೊಂದಿದ್ದು ಅಂತ್ಯದಲ್ಲಿ ಛಿದ್ರಛಿದ್ರವಾಗಿದ್ದರೆ ಬಾಲ್ಯದಲ್ಲಿ ಕಷ್ಟ, ವಿದ್ಯಾಭಂಗ, ಪರಸ್ಥಳವಾಸ, ಮಧ್ಯವಯಸ್ಸಿನಲ್ಲಿ ಅನಾಯಾಸವಾಗಿ ಐಶ್ವರ್ಯವನ್ನು ಹೊಂದುವನು. ಅಂತ್ಯದಲ್ಲಿ ಶತ್ರುತ್ವ, ಅನಾಯುಕತ್ವದಿಂದ ಎಲ್ಲ ರೋಗಗಳನ್ನು ಹಾಳುಮಾಡಿಕೊಳ್ಳುವನು.

ಮೊಂದುಮೊಂಡಾಗಿ [ ಮಂಡಲದ ಹಾವಿನ ಆಕಾರವಾಗಿ ] ಹಗ್ಗದಂತೆ ಈ ರೇಖೆಯು ಒಂದೇ ಇದ್ದರೆ ಸುಖಶಾಂತಿ ಕನಸಾಗುವುದು. ದುಡಿಮೆ ಅತಿ ಹೆಚ್ಚು, ಆದಾಯ ಅಲ್ಪ.

ಇಂತಹ ಹಸ್ತದಲ್ಲಿ [ಕೇಸರ] ಮಾಲಿಕಾ ರತಿರೇಖೆಯು ಭಿನ್ನವಾಗಿ ಪ್ರಕಾಶವಿಲ್ಲದೆ ಕಾಂತಿರಹಿತವಾಗಿದ್ದರೆ ಅಂತಹ ವ್ಯಕ್ತಿಗಳು ಭೂಲೋಕದಲ್ಲಿ ಪೂರ್ವಜನ್ಮದ ಪಾಪವನ್ನು ಕಳೆಯಲು ಹುಟ್ಟಿರುತ್ತಾರೆ.

[Fig No. 31 ]

೯. **ಕೇಸರರೇಖೆ** :— ಈ ರೇಖೆಯು ವ್ಯಕ್ತಿಯ ಭಾಗ್ಯೋದಯ, ಕೀರ್ತಿ ಮತ್ತು ಮನೆತನದ ಸಂಪತ್ತುಗಳನ್ನು ವರ್ಣಿಸುವುದು. ಈ ರೇಖೆಯು ವ್ಯಕ್ತಿಗಳ ಅಂಗುಷ್ಠದ ಮುಖಭಾಗದಲ್ಲಿ ಇಲ್ಲವಾದರೆ ದರಿದ್ರವು, ಕಷ್ಟಾರ್ಜಿತ ಜೀವನವು ಸಾಗುವುದು. ಅತಿ ದಪ್ಪ ದಪ್ಪವಾಗಿದ್ದರೆ ಅಲ್ಪ ಶ್ರಮದಿಂದ ಸಂಪಾದನೆಯು, ಮಧ್ಯಮಸುಖವು ಲಭಿಸುವುದು. ಈ ರೇಖೆಯು ತುಂಡುತುಂಡಾಗಿದ್ದರೆ ವ್ಯಕ್ತಿಗೆ ನಿರೀಕ್ಷಿಸಿಲ್ಲದ ವೃತ್ತಿಲಾಭ, ಅದೇ ರೀತಿ ಆತಂಕ, ಅತಿಯಾದ ಶ್ರಮದಿಂದ ದ್ರವ್ಯಾರ್ಜನೆ. ಈ ರೇಖೆಯು ಕೂದಲಿಗಿಂತ ಸಣ್ಣದಾಗಿದ್ದರೆ ಐಶ್ವರ್ಯ, ಕೀರ್ತಿ ಲಭಿಸುವುದು. ಆದರೆ ರೋಗಗಳ, ಶತ್ರುಗಳ ಕಾಟ ಹೆಚ್ಚಾಗಿರುವುದು. ಈ ರೇಖೆಯು ಫಲಿತ ರೇಖೆಯ ಪ್ರಥಮಭಾಗದಿಂದ [ಮೂಲಿಕಾರೇಖೆಯ ವರೆಗೆ] ಅಂತ್ಯದ ವರೆಗೆ ವಿಶೇಷವಾಗಿ ಮೂಡಿದ್ದರೆ ವ್ಯಕ್ತಿಯು ಭಾಗ್ಯವಂತರ ಮನೆಯಲ್ಲಿ ಹುಟ್ಟಿದವನೂ, ಕಲಾವಿಲಾಸಿಯೂ ಆಗಿರುವನು.

ಕೇಸರರೇಖೆಯು ಸರ್ಪಾಕಾರವಾಗಿ ಅಂಕುಡೊಂಕಾಗಿ ಸಾಗಿದ್ದರೆ ವ್ಯಕ್ತಿಗೆ ನರಗಳ ನಿಶ್ಶಕ್ತಿಯು ಉಂಟಾಗುವುದು. ಈ ರೇಖೆಯು ಹಾಲು ಸಾಗಿದ್ದರಾಗಲಿ ಅಥವಾ ಹದಿನಾರು ರೇಖೆಗಳಿಗಿಂತ ಹೆಚ್ಚಾಗಿದ್ದರೆ ವ್ಯಕ್ತಿಯು ಐಶ್ವರ್ಯವಂತರ ಮನೆತನದವನೂ ಮತ್ತು ಈತನು ಕೀರ್ತಿ, ಐಶ್ವರ್ಯ, ವಾಹನ, ಅಧಿಕಾರ ಸೇವಕರನ್ನು ಹೊಂದಿದವನೂ ಆಗಿರುತ್ತಾನೆ. ಇವನ ಜಾತಕದಲ್ಲಿ ಶುಕ್ರ ಅಥವಾ ಶನಿಗ್ರಹವು ಉನ್ನತ ಸ್ಥಾನದಲ್ಲಿರುವುದು.

ಅಂಗುಷ್ಠದ ಪ್ರಥಮಾರ್ಧದಲ್ಲಿ ಈ ರೇಖೆಯು ಕಾಣಿಸದೆ ದ್ವಿತಿಯಾರ್ಧದಲ್ಲಿ ವಿಶೇಷವಾಗಿ ಕಂಡರೆ ವ್ಯಕ್ತಿಯು ಬಡತನದಲ್ಲಿ ಹುಟ್ಟಿ ಅನೇಕ ರೀತಿ ಶ್ರಮಪಟ್ಟು ದ್ವಿತೀಯಾರ್ಧ ವಯಸ್ಸಿನಿಂದ ಶ್ರಮವಿಲ್ಲದ ವೃತ್ತಿ, ಅದರಿಂದ ಸುಖ, ಐಶ್ವರ್ಯ ಲಾಭಹೊಂದುವವನು.

ಈ ರೇಖೆಯು ಕೆಂಪುಗುಲಾಬಿ ಅಥವಾ ಕಪ್ಪಾಗಿ ಪಾರದಂತೆ ಇದ್ದರೂ ಶುಭಫಲ ಲಭಿಸುವುದು.

೭ ನೆಯ ಮೂಲಿಕಾರೇಖೆಯು ಕೋಡು ಕೋಡುಗಳಾಗಿ ಅಥವಾ ಛಿನ್ನವಾಗಿದ್ದರೆ ವ್ಯಕ್ತಿಯು ಮನೆತನದ ಐಶ್ವರ್ಯ, ಕೀರ್ತಿಯನ್ನು ಹಾಳು

ಮಾಡುವವನಾಗಿರುತ್ತಾನೆ. ಹಾಗೂ ಈ ರೇಖೆಯು ದಾರದಂತೆ ಸಣ್ಣಗೆ ಉದ್ದವಾಗಿದ್ದರೆ [ ಗುಲಾಬಿ ಬಣ್ಣವನ್ನು ಹೊಂದಿದ್ದರೆ] ಹೆಚ್ಚು ಸಿರಿವಂತನಾಗಿಯೂ, ಸತಿ–ಸುತರನ್ನು ಹೊಂದಿದವನಾಗಿಯೂ ಸುಖಿಸುವನು.

ವ್ಯಕ್ತಿಗಳ ಅಂಗುಷ್ಠದಲ್ಲಿ ಕೇಸರರೇಖೆಗಳು ಮಾಯವಾಗಿದ್ದು ಮಾಲಿಕಾರೇಖೆಯು ಸೊಗಸಾಗಿದ್ದರೂ ದೀರ್ಘಾಯುಷ್ಯ, ಸುಖಜೀವಿಯೂ ಆಗಿರುತ್ತಾನೆ.

ಈ ರೇಖೆಯ ಮೇಲೆ ಕಪ್ಪು ಚುಕ್ಕೆ ಇದ್ದರೆ ಪಿತೃಸಂಬಂಧಿಕರಿಂದ ಮನೆತನದ ಆಸ್ತಿ, ಐಶ್ವರ್ಯಗಳಿಗೆ ಹೆಚ್ಚು ಮೋಸವಾಗುವುದು.

ಉಳಿದ ಎಲ್ಲಾ ರೇಖೆಗಳಿಗಿಂತ ಈ ರೇಖೆಯು ಅತಿ ದಪ್ಪವಾಗಿ [ಜಿಡ್ಡು ಹಿಡಿದಂತೆ ಒರಟಾಗಿ] ಅಥವಾ ಕತ್ತರಿ ಗುರುತುಗಳನ್ನು ಹೊಂದಿದ್ದಾದರೆ ವ್ಯಕ್ತಿಗೆ ವಿವಾಹವಾಗುವುದಿಲ್ಲ. ಮತ್ತು ವಂಶದ ಉದ್ಧಾರಕ್ಕೆ ಭಂಗ ತಪ್ಪಲಾರದು. ಇದರಂತೆ ಫಲರೇಖೆಯು ಭಿನ್ನಭಿನ್ನವಾಗಿ ನಿಸ್ಸಾರವಾಗಿದ್ದರೆ [Dented or forked with board shape, the native will have to suffer in all the aspects] ವ್ಯಕ್ತಿಯು ಎಲ್ಲ ರೀತಿಯಿಂದಲೂ ಕಷ್ಟಪಡುವನು.

ಮಾಲಿಕಾ ಮತ್ತು ಫಲರೇಖೆಗಳು ಕತ್ತರಿಸಿದವರಿಗೆ ವಿವಾಹವಾದರೂ ಜೀವನ ಅಶಾಂತಿಯಿಂದ ಕೂಡಿರುವುದು.

ಫಲರೇಖೆಯು ಶತ್ರುರೇಖೆಯಿಂದ ಭಿನ್ನವಾಗಿದ್ದರೆ ಘೋರವಾದ ಶತ್ರುಗಳಿಂದ ಆಸ್ತಿ, ಐಶ್ವರ್ಯ, ಕೀರ್ತಿಗೆ ಧಕ್ಕೆಯುಂಟಾಗುವುದು.

ಮಾಲಿಕಾ ಅಥವಾ ಫಲರೇಖೆಗಳಲ್ಲಿ ಯಾವುದೊಂದಾದರೂ ಪ್ರಥಮಾರ್ಧ ಅಥವಾ ದ್ವಿತೀಯಾರ್ಧದಲ್ಲಿ ಭಿನ್ನವಾದರೂ ಭಿನ್ನವಾದ ಕಾಲದಲ್ಲಿ ವಿಶೇಷ ಅಡ್ಡಿಗಳನ್ನೂ, ದುಃಖವನ್ನೂ ವ್ಯಕ್ತಿಯು ಅನುಭವಿಸಬೇಕು.

ಗೋಧಿ, ಅನ್ನರೇಖೆಯು ಇಲ್ಲದಿದ್ದರೂ ಮೇಲೆ ಹೇಳಿರುವ ಎರಡು ರೇಖೆಗಳು ಸೊಗಸಾಗಿದ್ದರೂ ವ್ಯಕ್ತಿಯು ಸುಖಜೀವಿಯಾಗಿರುವನು.

೮. **ವಜ್ರರೇಖೆ** :— ಈ ರೇಖೆಯು ವಜ್ರದಂತೆ ಪ್ರಕಾಶವಾಗಿ ಹೊಳೆಯುವುದರಿಂದ ಇದು ವಜ್ರರೇಖೆ ಎಂದು ಕರೆಯಲ್ಪಟ್ಟಿರುವುದು.

ಶುಕ್ರಗ್ರಹವು ಜಾತಕದಲ್ಲಿ ಉಚ್ಚ ಅಥವಾ ಶುಭಕ್ಷೇತ್ರದಲ್ಲಿದ್ದು ಶುಕ್ರ ದೃಷ್ಟಿಯು ಶನಿಗ್ರಹದ ಮೇಲೆ ಇದ್ದರೆ ಈ ರೇಖೆಯು ಅಂಗುಷ್ಠದಲ್ಲಿ ಅತಿ ಯಾಗಿರುವುದು. ಈ ರೇಖೆಯು ಅಂಗುಷ್ಠದಿಂದ ಶುಕ್ರಪರ್ವದ ವರೆಗೆ ಹರಡಿರುವುದುಂಟು.

ಈ ರೇಖಾಚಿಹ್ನೆಯು ಅತಿ ಹೆಚ್ಚಾಗಿ ವ್ಯಕ್ತಿಯ ಹಸ್ತದಲ್ಲಿದ್ದು ರತಿ ರೇಖೆಗಳು ಭಿನ್ನಭಿನ್ನವಾಗಿದ್ದರೆ ವ್ಯಕ್ತಿಯು ಧನಿಕನೂ, ಮಾದಕ ಪದಾರ್ಥ ಸೇವಿಸುವವನೂ, ಮೇಹರೋಗ ಅಥವಾ ಸ್ತ್ರೀಯರಿಂದ ಉಂಟಾಗುವ ರೋಗಗಳನ್ನು ಅನುಭವಿಸುವವನೂ ಆಗಿರುತ್ತಾನೆ. ಹಾಗೂ ಕೇಸರ ರೇಖೆ ಗಳು ಅತಿಯಾಗಿದ್ದರೆ ಲಕ್ಷಾಧೀಶನೂ, ವಾಹನಾದಿ ರಾಜಯೋಗ, ಜೊತೆಗೆ ರೋಗಗಳ ಕಾಟವುಳ್ಳವನೂ ಆಗಿರುತ್ತಾನೆ.

ವಜ್ರರೇಖೆಯು ಅತಿಯಾಗಿದ್ದು ಕೇಸರರೇಖೆ, ಫಲರೇಖೆ ಭಿನ್ನಭಿನ್ನ–ವಾಗಿದ್ದರೆ [ Speculative type of fortune ] ವ್ಯಕ್ತಿಗೆ ಆದಾಯ, ವ್ಯಯ ನಿರ್ದಿಷ್ಟವಿರಲಾರದು.

ಚಿತ್ರ ೩೦ [೧೦] ಮಂಗಳರೇಖೆ :— [ Mangala Rekha. Commences from the guider of demon mount and cuts Rathi malika and phalarekha including the line of wheat ]. ಈ ರೇಖೆಯು ರತಿ, ಮಾಲಿಕಾ ಫಲ ಮತ್ತು ಅನ್ನರೇಖೆಯನ್ನೂ ಭೇದಿಸುವುದು.

ಈ ರೇಖೆಯು ಯಾವ ರೇಖೆಯನ್ನು ಭಂಗಗೊಳಿಸುವುದೋ ಆ ರೇಖೆಯ ಶುಭಫಲವು ವ್ಯಕ್ತಿಗೆ ಲಭಿಸುವುದಿಲ್ಲ. ರೋಗ, ದಾರಿದ್ರ್ಯ, ಶತ್ರುತ್ವಗಳು ಉಂಟಾಗುವಂತೆ ಮಾರ್ಪಡಿಸುವುದು.

೩೦ ಮಧುರ—ಈ ರೇಖೆಗೆ ಮಧುರ ಎಂದು ಹೆಸರು. ನೋಡಲು ಸಣ್ಣದಾಗಿ ಕಾಂತಿಯುತವಾಗಿದ್ದರೆ ವ್ಯಕ್ತಿಯು ದಾನ–ಧರ್ಮ ಗುಣವುಳ್ಳ ವನು.

೪೦ ಮಂದಾರ—ಈ ರೇಖೆಯು ಪ್ರಯಾಣಸೂಚಕ ರೇಖೆಯಾಗಿರು ವುದು.

೫೦ ಮನ—ಈ ರೇಖೆಯು ಉಪಸ್ತ್ರೀಸಂಗಗಳನ್ನೂ, ಸ್ತ್ರೀಯರ ಹಸ್ತದಲ್ಲಿದ್ದರೆ ಪುರುಷರ ಸ್ನೇಹವನ್ನೂ ಸೂಚಿಸುವುದು.

ಮಧುರ, ಮಂದಾರ, ಮನ ಈ ರೇಖೆಗಳು ಸಾಧಾರಣವಾಗಿ ವ್ಯಕ್ತಿಗಳ ಹಸ್ತದಲ್ಲಿ ಅಪರೂಪವಾಗಿ ಕಾಣುವುವು. ಆದ ಪ್ರಯುಕ್ತ ಗಣನೆಗೆ ತೆಗೆದುಕೊಳ್ಳುವುದು ಅತಿ ಮುಖ್ಯವಾಗಲಾರದು.

೬೦ ರತಿರೇಖೆ— ಈ ರೇಖೆಗೆ ಮೋಹಿನಿರೇಖೆ ಎಂದೂ ಕರೆಯುವರು. ಸಾಮುದ್ರಿಕಾಶಾಸ್ತ್ರದಲ್ಲಿ ಬುಧಪರ್ವದಲ್ಲಿರುವ ವಿವಾಹರೇಖೆಯು ವರ್ಣನೆಯಂತೆ ಈ ರೇಖೆಯು ಉದ್ದ, ಆಕಾರಗಳನ್ನು ಅನುಸರಿಸಿ ವಿವಾಹ, ಸಂಸಾರ ಸುಖ ಅಥವಾ ಉಪಸ್ತ್ರೀಸುಖಗಳನ್ನು ಹೇಳಬೇಕು. ಈ ರೇಖೆಗೆ ಎರಡು ಮೂರು ಉಪರೇಖೆಗಳು ಸೇರಿದ್ದರೆ ವ್ಯಕ್ತಿಗೆ ಅನೇಕ ಪತ್ನಿಯರ ಯೋಗ.

ಮೇಲೆ ಹೇಳಿದ ಉಪರೇಖೆಗಳು ಇದ್ದ ವ್ಯಕ್ತಿಯ ಹಸ್ತದಲ್ಲಿ ಅನ್ನರೇಖೆಯು ಭಿನ್ನಭಿನ್ನವಾಗಿ ಹೆಚ್ಚು ದಳಗಳನ್ನು [ಶಾಖೆಗಳನ್ನು] ಹೊಂದಿದ್ದರೆ ಒಬ್ಬೊಬ್ಬ ಪತ್ನಿವಿಯೋಗ [ಅಥವಾ ತೊರೆದಂತಲ್ಲಾ]ವಾದಂತೆಲ್ಲ ಪುನಃ ವಿವಾಹವಾಗುವುದು. [ ರತಿರೇಖೆಯು ಸ್ತ್ರೀಸುಖವನ್ನು ತಿಳಿಸುವುದು ]. [ ಸ್ತ್ರೀಯರಿಗೆ ಪತಿಸುಖವನ್ನು ತಿಳಿಸುವುದು].

ರತಿರೇಖೆಯು ಮೊಂಡಾಗಿದ್ದರೆ ಪತ್ನಿಯು ಒರಟು ಸ್ವಭಾವದವಳು. ಭಿನ್ನವಾಗಿದ್ದರೆ ಪತ್ನಿಗೆ ಆಗಾಗ್ಗೆ ಅನಾರೋಗ್ಯ, ಸುಖಭಂಗ.

ದ್ವೀಪಾಕೃತಿಯಿದ್ದರೆ ಪತ್ನಿಗೆ ರೋಗಬಾಧೆ. ಅಥವಾ ರೇಖೆಯು ಮಧ್ಯಭಾಗಕ್ಕೆ ಸರಿಯಾಗಿ ಕತ್ತರಿಸಿದ್ದರೆ ಸಂಸಾರಸುಖವು ಪ್ರಥಮದಲ್ಲಿ ಶುಭ, ಮಧ್ಯಕಾಲದಲ್ಲಿ ಪತ್ನಿಗೆ ಕಂಟಕ [ ಅಪಮೃತ್ಯುವಿನ ಶಂಕೆ ] ಉಂಟಾಗುವ ಸೂಚನೆ. ದ್ವಿತೀಯಾರ್ಧದಿಂದ ಸೊಗಸಾದ ರೇಖೆ ಇದ್ದರೆ ವ್ಯಕ್ತಿಗೆ ಮತ್ತೊಂದು ವಿವಾಹ.

ಈ ರೇಖೆಯ ಮೇಲೆ ಕಪ್ಪು ಚುಕ್ಕೆ ಅಥವಾ ಕತ್ತರಿರೇಖೆಗಳು ಇದ್ದರೆ ಪತ್ನಿಯು ವೈರಿಯಾಗುವಳು.

ಈ ರೇಖೆ ಹೆಚ್ಚು ಸೀಳಾಗಿದ್ದರೆ ಬ್ರಹ್ಮಚಾರಿಯಾಗಿ ಉಳಿಯಬೇಕಾಗುವುದು.

**ಚಿತ್ರ 31** ಫಲರೇಖೆ:— ೧ ರಿಂದ ೨ರ ವರೆಗೆ ಗೋಧಿರೇಖೆ ( ಫಲ ರೇಖೆಯು) ಅನ್ನರೇಖೆಯು. ಈ ರೇಖೆಗೆ ಪರಾಗರೇಖೆ ಎಂದು ಕರೆಯು ವರು. ಈ ರೇಖೆಯು ವ್ಯಕ್ತಿಯು ಪೂರ್ವಕರ್ಮವನ್ನು ಅನುಸರಿಸುವುದು. ಪೂರ್ವಜನ್ಮದಿಂದ ತುದಿರುವ ಶುಭಾಶುಭವನ್ನು ನಿರ್ವಂಚನೆಯಿಂದ ತೋರಿ ಸುವ ರೇಖೆ.

ಈ ರೇಖೆಗೆ ಪೂರ್ವಗ್ರಂಥಾಧಾರಗಳಲ್ಲಿ ೧೦೦ ರಿಂದ ೧೨೦ ವರ್ಷ ವೆಂದು ಕಾಲಮಿತಿ ನಿಯಮವಿರುವುದು. ಮತ್ತು ಈ ರೇಖೆಗೆ ಅನೇಕ ಮಿತ್ರ ರೇಖೆಗಳು ಸೇರುವುದುಂಟು; ಸಾಧಾರಣವಾಗಿ ಎಲ್ಲಾ ಅಂಗುಷ್ಠಗಳ ಲ್ಲಿಯೂ ಈ ಫಲರೇಖೆಯಲ್ಲಿ ಸ್ತ್ರೀ ಮತ್ತು ಪುರುಷ ಎಂಬ ಎರಡು ರೇಖೆ ಗಳು ಇರುವುವು. ವ್ಯಕ್ತಿಯು ಪುರುಷನಾದರೆ ಉಪರೇಖೆಯನ್ನು ಸ್ತ್ರೀರೇಖೆ ಯೆಂದೂ, ಸ್ತ್ರೀಯರ ಅಂಗುಷ್ಠವಾದರೆ ಪುರುಷರೇಖೆಯೆಂದೂ ನಿರ್ಧರಿಸ ಬೇಕು. ಈ ರೇಖೆಯು ಭಿನ್ನಭಿನ್ನವಾಗಿದ್ದರೆ (Dented line) ವ್ಯಕ್ತಿ ಗಳಿಗೆ ಸಾಂಸಾರಿಕ ಸುಖವು ಆಗಾಗ್ಗೆ ಭಂಗಹೊಂದುವುದು. ಕಷ್ಟ ಬಹಳ ಇದ್ದರೆ ಬಂದ ಲಾಭಗಳೆಲ್ಲಾ ವ್ಯಯವಾಗಿ ಹೋಗುವುವು. ಪತ್ನಿಶೋಕ ಪುರುಷನಿಗೆ, ಸ್ತ್ರೀಯಾದರೆ ಪತಿಶೋಕ ಮಧ್ಯಕಾಲದಲ್ಲಿ ಉಂಟಾಗುವುದು. (ಶಂಖ, ಚಕ್ರಭಾಗ) ಅಗ್ರವು ಧ್ವಜರೇಖೆಯಿಂದ ಭಿನ್ನವಾಗಿದ್ದು ಫಲ ರೇಖೆಯು ಭಿನ್ನಭಿನ್ನವಾಗಿದ್ದರೆ ವ್ಯಕ್ತಿಯ ಪತ್ನಿಯು ಪರಪುರುಷನನ್ನು ಅನುಸರಿಸುವಳು.

ಈ ರೇಖೆಯ ಅಂತ್ಯಭಾಗವು ನಿಸ್ಸಾರವಾಗಿದ್ದರೆ ವ್ಯಕ್ತಿಯ ಸಂತತಿಗಳು ದುರಾಚಾರಿಗಳು, ಅಲ್ಪಾಯುಗಳು ಆಗಿರುತ್ತಾರೆ ಅಥವಾ ಅಂತ್ಯದಲ್ಲಿ ವ್ಯಕ್ತಿಯು ಪುತ್ರಶೋಕವನ್ನು ಅನುಭವಿಸುವನು.

ಈ ರೇಖೆಯು ಪ್ರಥಮದಲ್ಲಿ ಭಿನ್ನವಾಗಿ ಸ್ವಕ್ಷೇತ್ರವನ್ನು ಬಿಟ್ಟು ಬೇರೆ ನೇರವಾಗಿ ಸಾಗಿದ್ದರೆ ವ್ಯಕ್ತಿಯು ಬಾಲ್ಯದಲ್ಲಿಯೇ ಹುಟ್ಟಿದ ಮನೆಯನ್ನು ಬಿಟ್ಟು ಅನೇಕ ಕಷ್ಟಗಳನ್ನು ಅನುಭವಿಸಬೇಕಾಗುವುದು.

ಕೆಲವು ಅಂಗುಷ್ಠಗಳಲ್ಲಿ ಪ್ರಥಮದಿಂದ ಉಪರೇಖೆಯು ಸುರುವಾಗಿರು ವುದು. ಇದು ಸ್ಪಷ್ಟವಾಗಿದ್ದರೆ ವ್ಯಕ್ತಿಗೆ ಸಾಂಸಾರಿಕ ಜೀವನವು ಅತಿ

ಬಾಲ್ಯದಲ್ಲಿಯೇ ಸುರುವಾಗುವುದು. ಹಾಗೂ ರೇಖೆ ಪ್ರಥಮದಿಂದ ಅಸ್ಪಷ್ಟ ವಾದ ರೇಖೆಯನ್ನು ಹೊಂದಿದ್ದರೆ ಎಷ್ಟು ದೂರದ ವರೆಗೆ ಅಸ್ಪಷ್ಟವಾಗಿರುತ್ತದೆಯೋ ಅಷ್ಟು ವಯಸ್ಸಿನ ವರೆಗೆ ವಿವಾಹವಾಗಿರುವುದಿಲ್ಲ. ಈ ರೀತಿ ಕಾಲಮಿತಿಯನ್ನು ಅರಿತು ಫಲ ತಿಳಿಸುವುದು ಶುಭ.

ಉಪರೇಖೆಯು ಒಂದಕ್ಕಿಂತ ಹೆಚ್ಚಾಗಿದ್ದರೆ ವ್ಯಕ್ತಿಯು ಅನೇಕ ಸ್ತ್ರೀಸುಖವುಳ್ಳವನು ಆಗಿರುತ್ತಾನೆ.

ಈ ಗೋಧಿರೇಖೆ (ಫಲರೇಖೆಗೆ) ಮಿತ್ರರೇಖೆಗಳು ಜೊತೆಯಾದರೆ (ಜೊತೆಯಾಗಿರುವ ಕಾಲಮಿತಿಯನ್ನು ಅರಿಯಬೇಕು) ಆ ಕಾಲದ ಅಂತರದಲ್ಲಿ ಭೂಮಿ, ಐಶ್ವರ್ಯ ವೃದ್ಧಿಯಾಗುವುದು.

ಮಾಲಿಕಾರೇಖೆಯು ಸೊಗಸಾಗಿದ್ದು ಫಲರೇಖೆಯೂ ಛಿನ್ನಭಿನ್ನ-ವಾಗಿದ್ದ ವ್ಯಕ್ತಿಯ ಅಂಗುಷ್ಠದ ಚರ್ಮದ ಹೊದಿಕೆ ಹತ್ತಿಯಂತೆ ಅತಿ ಮೃದುವಾಗಿದ್ದರೆ ವ್ಯಕ್ತಿಗೆ ನರದೌರ್ಬಲ್ಯ (ಕುಸುಮರೋಗ), ಸಕ್ಕರೆ ರೋಗವು ಪ್ರಾಪ್ತಿಯಾಗುವುದು.

ಗೋಧಿರೇಖೆ (ಫಲರೇಖೆಯು) ಮೀನಿನ ಆಕಾರವಾಗಿದ್ದರೆ ವ್ಯಕ್ತಿಗೆ ಶೀತ, ಕಫ ವ್ಯಾಧಿಯು ಉಂಟಾಗುವುದು. ಆ ವ್ಯಕ್ತಿಯು ಮೀನರಾಶಿಯಲ್ಲಿ ಉದಿಸಿರಲು ಸಾಧ್ಯ. ಈ ರೇಖೆಯ ಮಧ್ಯದಲ್ಲಿ ಗುಣಾಕಚಿಹ್ನೆ ಇದ್ದರೆ ( ಕತ್ತರಿ ಗುರುತು ) ವ್ಯಕ್ತಿಯು ೩೭ನೆ ಯಿಂದ ೩೯ನೆ ವಯಸ್ಸಿನೊಳಗೆ ಜೀವನಾಧಾರವಾಗಿದ್ದ ವ್ಯಕ್ತಿಯನ್ನು ಕಳೆದುಕೊಂಡು ಪರಸ್ಥಳಕ್ಕೆ ಹೋಗು-ವನು. ಇದೇ ಕಾಲದಲ್ಲಿ ಪತ್ನಿಗೆ ಕಂಟಕವು ಪ್ರಾಪ್ತಿಯಾಗುವುದು. ವ್ಯಕ್ತಿಗೆ ಸಂಶಯಸ್ವಭಾವವಿರುವುದು.

ಚಿತ್ರ ೩೧ (೭) ಈ ಮಾಲಿಕೆಯು ಬಳಿ ಮೀನು, ಬಳ್ಳಿ, ಪತ್ರ, ಧ್ವಜ ಮುಂತಾದ ಶುಭಚಿಹ್ನೆಗಳು ಇದ್ದರೆ ವ್ಯಕ್ತಿಯು ಪ್ರಭುವಾಗುವನು.

ಕೊಂಬು, ಸರ್ಪ, ಪೊರೆ, ದೌಂಷ್ಟ್ರ, ಚೇಳು, ಕಟಕ ರೇಖೆಗಳು ಇದ್ದರೆ ಸೇವಕವೃತ್ತಿ ಅಥವಾ ಸಾಮಾನ್ಯವೃತ್ತಿಯಿಂದ ಜೀವನ.

ಕೊಂಬುರೇಖೆ, ಭಿನ್ನರೇಖೆ, ಕತ್ತರಿ ಗುರುತುಗಳು ಇದ್ದರೆ ವ್ಯಕ್ತಿಗೆ ಸಂತತಿಭಾಗ್ಯಕ್ಕೆ ಅಡ್ಡಿಗಳಿರುವುದು.

ನೀಟಾದ ಎರಡು ಗೋದಿರೇಖೆ ಇದ್ದು ಒಂದಕ್ಕೊಂದು ಸೇರದೆ ದೂರ ದೂರವಿದ್ದರೆ ವ್ಯಕ್ತಿಗೆ ಸಂತಾನವು ಸದಿಯ ನೀರಿನಂತೆ ಬರುವುದು. ಅದೇ ರೀತಿ ವ್ಯಯ.

ಈ ರೇಖೆಯಲ್ಲಿ ಚುಕ್ಕಿಗಳು (ಬಿಂದುಗಳು) ಅಥವಾ ಕಚ್ಚುಕಚ್ಚುಗಳು (Dented) ಇದ್ದ ಪಕ್ಷದಲ್ಲಿ ಅನಾರೋಗ್ಯ ಹಾಗೂ ಕಪ್ಪು ಛಾಯೆಯು ರೇಖೆಯಲ್ಲಿ ವಿಶೇಷವಿದ್ದರೆ ವಾಯುರೋಗ, ಬಿಳಿಛಾಯೆ ಇದ್ದರೆ ಶೀತ ರೋಗ. ಅತಿ ಕೆಂಪುವರ್ಣವಿದ್ದರೆ ಉಷ್ಣಪಿತ್ತದಿಂದ ಶ್ರಮ ಉಂಟಾಗು- ವುದು.

ಮಾಸಲು, ಬೂದಿ, ಬಿಳಿ, ಕಪ್ಪು ಮಿಶ್ರಣವಾಗಿದ್ದರೆ ವಾಯು, ಉದರರೋಗ, ಅಜೀರ್ಣ ರೋಗವಿರುವುದು.

ಚಿತ್ರ ೩೨ : ಈ ಚಿತ್ರದಲ್ಲಿ ಅಂಗುಷ್ಠವು ಕಂಭಾಕಾರವಾಗಿ ಕಾಣು ವುದು. ಆದರೆ S ಕಡೆಯಿಂದ A ಕಡೆಗೆ ಬಾಗಿರುವುದು. ಈ ರೀತಿ ಬಾಗಿ ದ್ದರೆ ವ್ಯಕ್ತಿಗಳಿಗೆ ವಿವೇಚನಾಶಕ್ತಿಯು, S ಯಿಂದ R ವರೆಗೆ ಉಬ್ಬಿದಂತೆ ಇರುವುದರಿಂದ ಪರೋಪಕಾರಿ,ಪರರಿಗೆ ಮಾರ್ಗದರ್ಶಕರಾಗಿಯೂ, B ಯಿಂದ G ಭಾಗವು ದಪ್ಪವಾಗಿ ಸ್ಥಿರತೆ ಹೊಂದಿರುವುದರಿಂದ ಅಧಿಕಾರ, ದರ್ಪ, ಪ್ರತಾಪಶಾಲಿಗಳೂ, ಸಮಾಜದಲ್ಲಿ ಅಧಿಪತ್ಯವುಳ್ಳವರೂ ಆಗಿರುತ್ತಾರೆ. R ದಿಂದ G ವರೆಗೆ ಇರುವ ಮಾಲಿಕಾರೇಖೆಯು ಮಣಮಣಗಳುಳ್ಳದ್ದಾಗಿದ್ದು ( ಅಥವಾ ಸರಪಣಿಯಂತೆ ಇದ್ದ ಪಕ್ಷದಲ್ಲಿ ) ವ್ಯಕ್ತಿಯು ಮಾನಿತನದವರು ಶೂರರು, ಐಶ್ವರ್ಯ, ಕೀರ್ತಿ, ಪ್ರತಾಪಶಾಲಿಗಳೂ, ಬಹು ಬಂಧುಗಳುಳ್ಳ- ವರೂ ಆಗಿದ್ದಾರೆಂದು ತಿಳಿಯುವುದು. ಈ ವ್ಯಕ್ತಿಯು ಧೈರ್ಯಶಾಲಿಯೂ, ಭಾಗ್ಯವಂತನೂ ಆಗಿರುತ್ತಾನೆ.

ಚಿತ್ರ ೩೩ : ಮೇಲೆ ವಿವರಿಸಿದಂತಹ ( ಚಿತ್ರ ೩೨ ) ರೂಪವನ್ನು ಹೊಂದಿರುವುದು.

ಆದರೆ ಈ ಚಿತ್ರದಲ್ಲಿರುವ ಅಂಗುಷ್ಠದ ಆಕಾರ ಸಾಮಾನ್ಯವಾಗಿ ಸ್ತ್ರೀಯರ ಹಸ್ತದಲ್ಲಿರುವುದು. ಈ ರೀತಿಯ ಅಂಗುಷ್ಠವನ್ನು ಸ್ತ್ರೀಯರು ಹೊಂದಿದ್ದರೆ ರಾಜಪತ್ನಿಯರಾಗುವರು. ಅಥವಾ ರಾಜಕೀಯ ಮಾತ್ರ

ಸಾರ್ವಜನಿಕ ಕ್ಷೇತ್ರಗಳಲ್ಲಿ ಅತ್ಯುನ್ನತ ಕೀರ್ತಿ ಅಧಿಕಾರ ಹೊಂದಿರುತ್ತಾರೆ. ವಾಹನ, ಸೇವಕರು. ಐಶ್ವರ್ಯ, ಭೂಮಿ, ಮನೆ, ಪುತ್ರ–ಪೌತ್ರರೊಡ




ಗೂಡಿ ಸುಖಪಡುವರು. ಪರಾಕ್ರಮ, ಧೈರ್ಯ, ಸ್ಥೈರ್ಯ ಉಳ್ಳವರಾಗಿರುತ್ತಾರೆ. ೩೨ ಮತ್ತು ೩೩ನೆಯ ರೀತಿಯ ಅಂಗುಷ್ಠವುಳ್ಳವರು ಆದಿಯಿಂದ ಅಂತ್ಯದ ವರೆಗೆ ನಿಶ್ಚಿಂತರೂ, ಧನಿಕರೂ, ಸುಖಭೋಜನ ಪಡೆಯುವವರೂ, ಕೀರ್ತಿಶಾಲಿಗಳೂ ಇರುವರು.

ಚಿತ್ರ ೩೪ : ಈ ಚಿತ್ರದಲ್ಲಿರುವ ಅಂಗುಷ್ಠವು ಒರಟು ಮತ್ತು ಅತಿ ದಪ್ಪನಾದ ರೇಖೆಗಳನ್ನು ಹೊಂದಿರುವುದು. ಮೂಲಿಕಾ ಮತ್ತು ಗೊಂಧಿ ರೇಖೆಗಳು ಅತಿ ದಪ್ಪವಾಗಿಯೂ, ಭಿನ್ನವಾಗಿಯೂ ಇರುವುವು. ಇದರಿಂದ ಸೇವಕವೃತ್ತಿಯಿಂದ ಜೀವನ, ಪರರ ಹಿತಚಿಂತನಾಗುಣವುಳ್ಳವನೂ ಆಗಿ ಜೀವನ ಸಾಗಿಸುವನು. (ಈ ರೀತಿ ಅಂಗುಷ್ಠವುಳ್ಳವರು ತಾಂತ್ರಿಕ ಶಾಖೆಗಳಲ್ಲಿ ಫೋರ್‌ಮನ್, ಮೇಸ್ತ್ರಿ, ವಾಹನಾದಿ ಚಾಲಕವೃತ್ತಿಗಳಲ್ಲಿ ಜೀವನ ಸಾಗಿಸುವರು).

ಚಿತ್ರ ೩೬ : ಪುರುಷನ ಬಲಹಸ್ತದ ಮುದ್ರೆ ಹೀಗೆ ಮುದ್ರಿಸಿರುವಾಗ ರೇಖೆಗಳ ಕಾಲಮಿತಿಯನ್ನು ಅಳೆಯುವಾಗ. ರೇಖೆಯ ಸುರುವಾದ (St. or Starting ) ಭಾಗದಿಂದ ವ್ಯಕ್ತಿಯ ಬಾಲ್ಯವೆಂದೂ (End. Ending) ಎಂದು ಗುರುತಿಸಿರುವ ಭಾಗ ವ್ಯಕ್ತಿಯ ಕೊನೆಯ ವರ್ಷಗಳನ್ನೂ

ನಿರ್ಧರಿಸುವ ಭಾಗವೆಂದು ತಿಳಿಯುವುದು. A ಜೀವರೇಖೆಯು ಸುರುವಿನಿಂದ B ಶುಕ್ರಪರ್ವತದ ಅಂತ್ಯದ ವರೆಗೆ ಬಿಳಿಯ ಚುಕ್ಕೆಗಳು ಮತ್ತು ಕಿರುರೇಖೆಗಳು ಅತಿಯಾಗಿ ಇರುವುವು. ಇದರಿಂದ ವ್ಯಕ್ತಿಯು ಜನ್ಮತಃ ಭಾಗ್ಯವಂತನೆಂದು ತಿಳಿಯುವುದು. ಅಂಗುಷ್ಠದ ಮಧ್ಯದಿಂದ ಅಲ್ಪ ಮೀನಿನ ಆಕೃತಿ ಇರುವುದರಿಂದ ಮಧ್ಯವಯಸ್ಸಿನಲ್ಲಿ ಕೀರ್ತಿ, ಐಶ್ವರ್ಯ ಮಹತ್ತರವಾಗಿ ಇರುವುದೆಂದು ತಿಳಿಯುವುದು. ಈ ರೇಖೆಯು ಮೇಲ್ಭಾಗದಲ್ಲಿರುವ ರತಿರೇಖೆಯು ಅನೇಕ ಉಪರೇಖೆಗಳನ್ನು ಹೊಂದಿರುವುದರಿಂದ ಉಪಸ್ತ್ರೀಸುಖ ಅತಿಯಾಗುವುದೆಂದು ತಿಳಿಸುವುದು.

ಚಿತ್ರ ೩೮ ಈ ಚಿತ್ರದಲ್ಲಿ ಅಂಗುಷ್ಠವು ಉದ್ದವಾಗಿಯೂ A, C, B ವರೆಗೆ ಯವರೇಖೆ (ಫಲರೇಖೆ) ಇರುವುದು. ಇದಕ್ಕೂ ಮಿಗಿಲಾಗಿ ರತಿರೇಖೆಯು (ಚೌಕದೊಳಗೆ) ಸುಂದರವಾದ ಮುಖ, ಬಾಲ, ಹೊಟ್ಟೆ ಹೊಂದಿರುವ ಪೂರ್ಣ ಮೀನಿನ ಆಕಾರ ಹೊಂದಿರುವುದು. ಇದರಿಂದ ವ್ಯಕ್ತಿಗೆ ವಿವಾಹದ ನಂತರ ಮಹತ್ತರ ಐಶ್ವರ್ಯ, ಕೀರ್ತಿಯು, ಅಧಿಕಾರವು ಲಭಿಸುವುದರ ಸೂಚಕ. D ಮಾಲಿಕಾರೇಖೆಯು ಪ್ರಥಮದಿಂದಲೂ ಸರಪಳಿಯಂತೆ ಮಣಿರೇಖೆಯನ್ನು ಹೊಂದಿರುವುದರಿಂದ ವ್ಯಕ್ತಿಯು ಭಾಗ್ಯವಂತರ ಮನೆಯಲ್ಲಿ ಜನಿಸಿರುವನು.

ಚಿತ್ರ ೪೦ ಈ ಚಿತ್ರದಲ್ಲಿ C ಗುರುತಿನ ಹಿಂಭಾಗದಲ್ಲಿ ಭಗ್ನವಾದ ಗೆರೆಗಳು ಮಾಲಿಕೆಯಲ್ಲಿರುವುವು. ಮತ್ತು ಗೋಧಿರೇಖೆಯು (ಯವರೇಖೆ) ಪ್ರಥಮದಲ್ಲಿ ಭಿನ್ನವಾಗಿರುವುದು. ಇದರಿಂದ ವ್ಯಕ್ತಿಯು ಬಾಲ್ಯದಲ್ಲಿ ಸ್ವಸ್ಥಳವನ್ನು ತೊರೆದು ಬೇರೆ ಊರುಗಳಲ್ಲಿ ಅನೇಕ ಕಷ್ಟಗಳನ್ನು ಪಟ್ಟು (C ವರೆಗೆ) ೩೦, ೩೧ ವರ್ಷ ಸೇವಕವೃತ್ತಿಗಳನ್ನು ಮಾಡುವನು. C ಯಿಂದ A, B ಭಾಗವನ್ನು ಸೇರಿದಾಗ ಮಾಲಿಕಾರೇಖೆಯಲ್ಲಿ ಹೂವಿನ ಮೊಗ್ಗಿನ ಆಕಾರ ಕಾಣುವುದು. ಇದರಿಂದ ವ್ಯಕ್ತಿಗೆ ೩೦ ನೆಯ ವಯಸ್ಸಿನಿಂದ ವಿಶೇಷ ರಾಜಯೋಗ, ಕೀರ್ತಿ ವೃದ್ಧಿಯು ಲಭಿಸುವುದೆಂದು ತಿಳಿಯಬೇಕು. ಅನ್ನರೇಖೆಯು ದ್ವಿತೀಯ ರೇಖೆಗೆ ಹ ಸಹಕಾರ ರೇಖೆಗಳು ಶುಭಫಲ, ಸಂಸಾರಭಾಗ್ಯವನ್ನು ನೀಡುವುದು.

೯. ರತಿರೇಖೆಯು ಪ್ರಥಮದಲ್ಲಿ ಭಿನ್ನವಾಗಿರುವುದರಿಂದ ವ್ಯಕ್ತಿಯು ವಿವಾಹಕ್ಕೆ ಮೊದಲು ಸ್ತ್ರೀಮೂಲಕ ತೊಂದರೆಗಳನ್ನು ಅನುಭವಿಸಬೇಕಾಗುವುದು. B ಯಿಂದ ೯–ಎರಡು ರೇಖೆಗಳಂತೆ ಕಾಣುವುದು. ವ್ಯಕ್ತಿಗೆ ಸ್ತ್ರೀಸ್ನೇಹ ಅತಿಯಾಗಿ ಬೇಕು.

ಮೇಲೆ ಹೇಳಿದ ಹೂವಿನ ಮೊಗ್ಗು ವ್ಯಕ್ತಿಗೆ ಐಶ್ವರ್ಯ, ಕೀರ್ತಿ, ಮನೆ, ಸಂತತಿಫಲಗಳನ್ನು ನೀಡುವುದು.

ಚಿತ್ರ ೪೫— ಕಂಭದಾಕಾರವಾಗಿಯೂ ನಖಭಾಗವು ( Top of the thumb resembling the face of a lion) ಸಿಂಹದ ಮುಖದಂತೆ ಇರುವುದು. ಇದರಿಂದ ವ್ಯಕ್ತಿಯು ಪ್ರತಾಪಿಯೂ, ಶಿಸ್ತುಪಾಲನೆ ಮಾಡುವವನೂ, ಖಂಡಿತವಾದಿಯೂ ಆಗಿರುವನು. A ಕಡೆಯಿಂದ ಹೊರಟ ರೇಖೆಯು ಕತ್ತರಿಸದೆ B ಕಡೆಗೆ ಸಾಗುತ್ತಿದ್ದಂತೆ ಅಂತ್ಯದಲ್ಲಿ ಹೂವಿನ ಮೊಗ್ಗಿನ ಆಕಾರ ಪಡೆದಿರುವುದು. ಇಂಥ ವ್ಯಕ್ತಿಯು ಬಾಲ್ಯದಲ್ಲಿ ಸಾಮಾನ್ಯ ಸುಖಿಯು, ಐಶ್ವರ್ಯವಂತರ ಮನೆಯಲ್ಲಿ ಹುಟ್ಟಿದವನೂ. ಮಧ್ಯವಯಸ್ಸಿನಿಂದ ಮಹತ್ತರ ಐಶ್ವರ್ಯವನ್ನೂ ಪಡೆಯುವನು. ಮಾಲಿಕಾರೇಖೆಯಲ್ಲಿ ಮೀನಿನ ಚಿಹ್ನೆ ಮತ್ತು ಚೌಕ, ತ್ರಿಕೋಣ ಗುರುತು ಇರುವುದರಿಂದ ನಾನಾ ತಾಂತ್ರಿಕ ಶಾಖೆಗಳನ್ನು ತೆರೆದು ಕೀರ್ತಿ, ಐಶ್ವರ್ಯ ಪಡೆಯುವನು. C ರೇಖೆಯು (Mana) ವ್ಯಕ್ತಿಯ ಚತುರತೆಯನ್ನು, ಭಾಗ್ಯವನ್ನು C ಮತ್ತು D ರೇಖೆಗಳು ಮಧ್ಯದಲ್ಲಿರುವ ಉದ್ದನೆಯ ಕಿರುರೇಖೆಗಳು (ಕೇಸರ) ದ್ವಿತೀಯಾರ್ಧದಿಂದ ಮಹತ್ತರ ಭಾಗ್ಯವನ್ನೂ ಉದ್ಭವಾದ D (ರತಿರೇಖೆ) ಸಂಸಾರ ಸುಖವನ್ನೂ. A ಯಿಂದ D ವರೆಗೆ ಚರ್ಮದ ಪದರಗಳು (Skin ridges are not forked) ಭಿನ್ನವಾಗದೆ ಸುಂದರವಾಗಿರುವುವು. ಮತ್ತು ಇದರ ಮೇಲೆ ಅಡ್ಡ ಕೇಸರರೇಖೆಗಳು ಕಾಣುವುದಿಲ್ಲ. ಇದರಿಂದ ಗಟ್ಟಿ ಪದಾರ್ಥಗಳಿಂದ ಲಾಭ, ದ್ರವ್ಯಾರ್ಜನೆ.

ಚಿತ್ರ ೪೬ ಈ ಚಿತ್ರದಲ್ಲಿ ಶಿರಭಾಗದಲ್ಲಿ ಭೂಪದರ ಶಂಖದ ಕೇಂದ್ರವು ಅಲ್ಪ ಮೇಲೆದ್ದಂತೆ ಇರುವುದು. ಹಿಂದೆ ವರ್ಣಿಸಿರುವ (೧೫ನೆಯ ಹೆಬ್ಬೆರಳ

ನಂತೆ) ಹಾಗೆ ಈ ಹೆಬ್ಬೆರಳು ಉದ್ದವಾಗಿರುವುದು. ವ್ಯಕ್ತಿಯು ಧೈರ್ಯ, ಸಾಹಸವಂತನು. ೫೧ ರಿಂದ ೫೩ರ ವರೆಗೆ ಉದ್ದನೆಯ ಕೇಸರ ರೇಖೆಗಳು ಇರುವುದರಿಂದಲೂ, A, C, E ೫೩, ಕೆಳಗೆ ಇರುವ ಮಾಲಿಕಾ ರೇಖೆಯೂ ಸೇರಿ ( Chathur Malika ) ನಾಲ್ಕು ರೇಖೆಗಳು ಕೇಸರ ರೇಖೆಗಳ ಮಧ್ಯದಲ್ಲಿ ( Thare ) ಬಿಳಿಯ ಬಿಂದು ರೇಖೆಗಳು ಇರುವುದರಿಂದ ವ್ಯಕ್ತಿಯು ವೈಭವ, ಭೋಗವಸ್ತುಗಳ ವಿಕ್ರಯದಿಂದ ಸಂಪಾದಿಸುವನು. ನಾನಾ ವಾಹನಗಳನ್ನು, ಪತ್ರಾರು ಉಪಸಂಪಾದನಾ ವೃತ್ತಿಯುಳ್ಳವನೂ, ನೂರಾರು ಜನ ಸೇವಕರುಳ್ಳವನೂ, ಲಕ್ಷಾಧೀಶನೂ ಆಗಿರುತ್ತಾನೆ. A ಯಿಂದ B ವರೆಗೆ ಇರುವ ರೇಖೆ ಮತ್ತು C, D ರೇಖೆಯು ಕತ್ತರಿಸಿರುವುದರಿಂದ ವೃತ್ತಿಶಾಖೆಗಳು ಆಗಾಗ್ಗೆ ಬದಲಾವಣೆಯನ್ನು ಹೊಂದಿರುವುದರ ಸೂಚನೆ.

E ಯಿಂದ F ವರೆಗೆ ಇರುವ ರತಿರೇಖೆಯು ಅಲ್ಪ ಭಿನ್ನವಾಗಿಯೂ ದ್ವೀಪವುಳ್ಳದ್ದಾಗಿಯೂ ಇರುವುದರಿಂದ ವ್ಯಕ್ತಿಗೆ ಪತ್ನಿ ಭಾಗ್ಯವಿದ್ದರೂ ಅನೇಕ ಉಪಪತ್ನಿಯರ ಸೌಹಾರ್ದತೆಯು ಇರುವುದು.

ಮಾಲಿಕಾರೇಖೆ ಭಿನ್ನವಾಗಿದ್ದರೂ ಕೇಸರರೇಖೆಗಳ ಪ್ರಭಾವ ಅತಿ ಹೆಚ್ಚಾಗಿರುವುದರಿಂದ ಪತ್ನಿ-ಪುತ್ರರು ಐಶ್ವರ್ಯ, ಸಮಾಜದಲ್ಲಿ ಅತ್ಯುನ್ನತ ಸ್ಥಾನಮಾನ, ಪರೋಪಕಾರ ಗುಣವುಳ್ಳವರು ಆಗಿರುತ್ತಾರೆ.

[ಸೂಚನೆ : ೪೫ನೆಯ ಚಿತ್ರದಲ್ಲಿ ಕೇಸರ ತಾರಾರೇಖೆಗಳು ಅತಿಯಾಗಿ ಇಲ್ಲವಾದ್ದರಿಂದ ತಾಂತ್ರಿಕ ಸಂಸ್ಥೆಯ ಅಧಿಪತ್ಯವೆಂದೂ ೪೬ ನೆಯ ಚಿತ್ರದಲ್ಲಿ ತಾರಾ ಕೇಸರ ರೇಖೆಗಳು ಅತಿಯಾಗಿರುವುದರಿಂದ ವೈಭವ. ಭೋಗವಸ್ತುಗಳಿಂದ ದ್ರವ್ಯಾರ್ಜನೆಯೆಂದೂ ತಿಳಿಯುವುದು.]

Fig. ೪೬ ಹೆಬ್ಬೆರಳಿನಲ್ಲಿರುವ ಚಕ್ರಾಕಾರದ ಮಧ್ಯದಲ್ಲಿ (ಓವಲ್ ಆಕಾರ) ಪೂರ್ಣವೃತ್ತಾಕಾರವು ಇರುವುದರಿಂದ ವ್ಯಕ್ತಿಯು ವಿಶೇಷ ಬುದ್ಧಿವಂತನೂ, ಧಾರ್ಮಿಕ ಮನೋಭಾವ, ವಿದ್ಯಾ-ವಿನಯಸಂಪನ್ನನೂ, ಸಮಾಜ ಸಂಸ್ಥೆಗಳಲ್ಲಿ ಮಹತ್ತರ ಗೌರವ ಹೊಂದಿರುವವನೂ ಆಗಿರುತ್ತಾನೆ. ಅವನಿಗೆ ಬಾಲ್ಯದಲ್ಲಿ ಅಲ್ಪ ಶ್ರಮವಾಗುವುದು. A ರೇಖೆಯು

ಸುರುವಿನಲ್ಲಿ ಅಸ್ಪಷ್ಟವಾಗಿರುವುದು. D ಅಡ್ಡಗೆರೆಗಳು ಕೀರ್ತಿ, ಸಂತತಿ, ವಾಹನಾದಿ ಯೋಗಗಳನ್ನು ಕೊಡುವವು ಇದರ ಜೊತೆಗೆ ಕೇಸರ ರೇಖೆಗಳು ವಿಶೇಷವಾಗಿರುವವು. A ಯಿಂದ F ವರೆಗೆ ಇರುವ ಭಾಗದಲ್ಲಿ ಕೇಸರರೇಖೆಗಳು ಇಲ್ಲದಿರುವುದರಿಂದ ವ್ಯಕ್ತಿಗೆ ೨೮ನೆಯ ವಯಸ್ಸಿನ ವರೆಗೆ ಶ್ರಮಜೀವನವೂ ನಂತರ ಭಾಗ್ಯಕಾಲವೂ ಇರುವುದು.

ಮಾರಿಕಾರೇಖೆಯನ್ನು F ಬಳಿಯಲ್ಲಿ ರಕ್ತರೇಖೆಗಳು ಭೇದಿಸಿರುವುದರಿಂದ ಪಿತೃಶುಬಾಧಿಕರುಗಳ ತೊಂದರೆ ಬಾಲ್ಯದಲ್ಲಿದ್ದಿತೆಂದು ತಿಳಿಸುವುದು (From the mars lines) A. B, C ರೇಖೆಗಳು ಇಬ್ಭಾಗ (Forked) ವಾಗಿರುವುದರಿಂದ ಲಕ್ಷಾಂತರ ರೂಪಾಯಿ ಲಾಭ. ಆದರೆ ದುಂದುವ್ಯಯ ಹೆಚ್ಚು. ೩೪, ೩೫ನೆಯ ವಯಸ್ಸಿನಿಂದ ನಾನಾವೃತ್ತಿಗಳು, ಸುಲಭ ಸಂಪಾದನೆಯೂ ಇರುವವು.

೮A. ಈ ಚಿತ್ರದಲ್ಲಿ ಗೋಧಿರೇಖೆಯು [ ಯವ ] ಪ್ರಥಮದಲ್ಲಿ ಯವಾಕಾರವನ್ನು ಹೊಂದಿಲ್ಲ ಸ್ವಲ್ಪ ದೂರದಿಂದ ಮಾತ್ರ ಎರಡು ರೇಖೆಯಾಗಿ [ಸ್ತ್ರೀಯ ಅಂಗುಷ್ಠವಾದ್ದರಿಂದ ಎಡದಿಂದ ಅಳೆಯಬೇಕು]. ಪರಿಣಮಿಸಿರುವುದು. ಆದರೂ ಸ್ವಲ್ಪ ದೂರದಲ್ಲಿ ಈ ರೇಖೆಯು ಭಿನ್ನವಾಗಿರುವುದು. ಇದರಿಂದ ೩೧ನೆಯ ವಯಸ್ಸಿನಿಂದ ಸುಖ-ಶಾಂತಿಯು ಅಲ್ಪವಿರುವುದು. ಆದರೆ A, B ಮತ್ತು C, D ರೇಖೆಗಳು ಒಂದನ್ನೊಂದು ಕೇಂದ್ರದಲ್ಲಿ ಭೇದಿಸಿರುವುದರಿಂದ ವಿವಾಹವಾಗಿದ್ದರೂ ಸಂಸಾರಸುಖ ಭಂಗ. ಪತಿಯು ರೂಪವಂತ, ಗುಣವಂತ ಆದರೂ ಸಹ ಸಂಸಾರಸುಖ ಭಂಗ. ಈ ರೀತಿಯ ಗುಣಚಿಹ್ನೆ ಸ್ತ್ರೀಯರ ಎಡ ಅಥವಾ ಬಲ ಹೆಬ್ಬೆರಳಿನಲ್ಲಿ ಚಿತ್ರದಲ್ಲಿರುವಂತೆ ವಿಶಾಲವಾಗಿ ಆವರಿಸಿದ್ದರೆ ಪತಿಯ ಸುಖ ಕನಸಾಗುವುದು. ಆದರೆ ಗೋಧಿರೇಖೆ ಸೊಗಸಾಗಿರುವುದರಿಂದ ಪತಿಯಿಂದ ಸಂಭೋಗಸುಖ ಮಾತ್ರ ಸಿಗುವುದಿಲ್ಲ ಆದರೆ ಉಳಿದ ಊಟ, ತಿಂಡಿ, ಬಟ್ಟೆ ಎಲ್ಲಾ ದೊರೆಯುವುದು.

RT ೪೨ C. B ಗೋಧಿರೇಖೆಯು ಶುಭವಾಗಿರುವುದು. A ರೇಖೆಯು ಉಪಗೋಧಿರೇಖೆಯ ಆಕಾರವನ್ನು ಹೊಂದಿರುವುದು. ಆದರೆ

A.B ಸುರುವಿನಿಂದ ಎರಡು ರೇಖೆಗಳನ್ನು ಹೊಂದುತ್ತಿರುವುದರಿಂದ ಹುಟ್ಟಿದ ಮನೆಯಲ್ಲಿಯೂ ವಿಶೇಷ ಐಶ್ವರ್ಯ, B, F ಕಡೆಯಿಂದ P ಕಡೆಯ ವರೆಗೂ ತಾರಾ ಕೇಸರ ರೇಖೆಗಳು ಇರುವುದರಿಂದ ವಿಶೇಷ ಯೋಗ ಭಾಗ್ಯಗಳನ್ನು [ಅಷ್ಟೈಶ್ವರ್ಯ] ಪತಿಯನ್ನು ಪಡೆದು ಸುಖವಾಗಿರುವರು. F ಪತಿರೇಖೆಯು ಅಲ್ಪ ದೋಂಕವಾಗಿದ್ದರೆ ಪತಿಯು ಅಲ್ಪ ಚಂಚಲ ಗುಣವುಳ್ಳವರು, ಆದರೂ ಪೂರ್ಣಾಯುವುಳ್ಳವರು. ಈ ಚಿಹ್ನೆಯುಳ್ಳವರು ವಜ್ರ, ವೈಢೂರ್ಯ, ವಾಹನ-ಸೇವಕರುಗಳುಳ್ಳ ರಾಜಯೋಗ ಅನುಭವಿಸುವರು.

ಮೇಲೆ ಹೇಳಿದ ಚಿಹ್ನೆಗಳು ಪುರುಷರ ಹಸ್ತದಲ್ಲಿದ್ದರೂ ಜೀವನದಂತ್ಯದ ವರೆಗೆ ಸುಖಜೀವಿಗಳಾಗಿರುತ್ತಾರೆ. ಕೀರ್ತಿ-ಸಂತತಿಗಳನ್ನೂ ಪಡೆಯುವರು.

೭೦ ಈ ಚಿತ್ರದಲ್ಲಿ H ಭಾಗದಲ್ಲಿ ಎರಡು ಕೋಣಿನಾಕಾರದ ಚಿಹ್ನೆಗಳು ಹಾಗೂ ಬಿಳಿಯ ಚುಕ್ಕಿಗಳು ಕಿಡಿಗಳಂತೆ ಸುರುಳಿಯಲ್ಲಿರುವುವು. ಇದು ವ್ಯಕ್ತಿಗೆ ವಿದ್ಯಾಭಂಗ, ಹುಟ್ಟಿದಾಗಿನಿಂದಲೂ ಬಡತನವನ್ನು ತಿಳಿಸುವುದು. ಇದಕ್ಕೂ ಮಿಗಿಲಾಗಿ A ಗೋಧಿರೇಖೆಯ ಮೇಲೆ A ಯಿಂದ O ವರೆಗೆ ಬರಡು [ಸತ್ವರಹಿತ ಗೋಧಿರೇಖೆ] ರೇಖೆಯಾಗಿರುವುದು. ಇದರಿಂದಲೂ ವ್ಯಕ್ತಿಯು ಕಡು ಬಡವನ ಮನೆಯಲ್ಲಿ ಜನಿಸಿದವನೂ, D ರೇಖೆಯು ತುಂಡಾಗಿರುವುದರಿಂದ ಚಂಚಲ ಪ್ರಕೃತಿಯುಳ್ಳವನೂ, ವಿದ್ಯಾಹೀನನೂ, ದುರ್ಮಾರ್ಗಪ್ರವರ್ತಕನೂ ಅತಿ ಮಹತ್ತರ ಕಷ್ಟ ಅನುಭವಿಸುವನು.

ಚಿತ್ರ ೭೦ P ಕಡೆಯಿಂದ G ಕಡೆಯ ವರೆಗೆ ಇರುವ ರತಿರೇಖೆಯು ಸೀಳು-ಸೀಳುಗಳನ್ನು ಹೊಂದಿ [ಬಾಯಿಬಿಟ್ಟಂತೆ] ಇರುವುದರಿಂದ ಪತ್ನಿಯನ್ನು ಸಾಕಬೇಕಾದ್ದು ಸಂಪಾದನೆಯು ಇಲ್ಲವುದಿಲ್ಲ. ಪತ್ನಿಗೆ ಚಿತ್ರವಿಚಿತ್ರವಾದ ಕಿರುಕುಳ ಕೊಟ್ಟು [A ರೇಖೆಯಿಂದ ಸೀಳು O ರೇಖೆ ನೇರದಲ್ಲಿ ಕೆಳಗೆ ಬಾಗಿದ] ದೇಶಾಂತರ ಓಡಿಹೋಗುವನು. ಪತ್ನಿರೇಖೆಯು [ರತಿರೇಖೆ] L ಮತ್ತು D ಕಡೆಗ H ಮತ್ತು J ಗುರುತಿನ ಕಡೆಗೆ ಕವಲಾಗಿರುವುದರಿಂದ ಪತ್ನಿಯು ಅನ್ಯರನ್ನು ಆಶ್ರಯಿಸಿ ಅಪವಾದ, ಕಷ್ಟಗಳನ್ನು ಎದುರಿಸುವಳು

ಮಾಲಿಕ.ರೇಖೆಯು H ಕಡೆಯಿಂದ I ವರೆಗೆ ಅತ್ಯಂತ ದಪ್ಪ ಧೂಮ್ರವರ್ಣವುಳ್ಳದ್ದಾಗಿಯೂ J ಕಡೆಯ ವರೆಗೂ ಈ ರೇಖೆಯು ಸ್ವಲ್ಪವೂ ಶುಭಚಿಹ್ನೆಯನ್ನು ಹೊಂದದೇ ಇರುವುದರಿಂದ ಆದಿಯಿಂದ

ಅಂತ್ಯದ ವರೆಗೆ ತುಂಬ ಕಷ್ಟ. ಕತ ಸಾಗಿಸುವುದರಿಂದಲೂ, ಪರರ ಮನೆಯಲ್ಲಿ ಅಡಿಗೆ ಮಾಡುವುದರಿಂದಲೂ ಜೀವನ. ಕೊನೆಗೂ ಪತ್ನಿಗೂ ಸುಖವಿಲ್ಲ, ಇವನಿಗೂ ಶಾಂತಿಯಿಲ್ಲ. B ಯಿಂದ J ವರೆಗೆ ಮತ್ತು A ಯಿಂದ H ವರೆಗೂ ಮಧ್ಯದಲ್ಲಿ ಕೇಸರ ತಾರಾರೇಖೆಗಳು ಸ್ವಲ್ಪವೂ ಇಲ್ಲವಾದ್ದರಿಂದ ಕಷ್ಟಾರ್ಜಿತ ಜೀವನ.

೫೪ ಅಂಗುಷ್ಠದ [ದ್ವಿತೀಯ ಭಾಗ] C ಭಾಗದಲ್ಲಿ ತಾರಾ ಕೇಸರ ರೇಖೆಗಳು ಇರುವುದರಿಂದ ವ್ಯಕ್ತಿಯು ಮಧ್ಯಮ ಭಾಗ್ಯವಂತನು. D ಯಿಂದ B ವರೆಗೆ ಇರುವ ರತಿರೇಖೆಯು ಇಬ್ಭಾಗವಾಗಿರುವುದು. ಮತ್ತು ಎರಡು ರೇಖೆಯಾಗಿ ಮಾರ್ಪಟ್ಟಿರುವುದು. D ಭಾಗದಲ್ಲಿ ರೇಖೆಯು ಅತಿ ದಪ್ಪವಾಗಿರುವುದು. ಇದರಿಂದ ಸಂಸಾರದಲ್ಲಿ ಆದಿಯಿಂದ ಅಶಾಂತಿ ಎಂದೂ A ಕಡೆಯಿಂದ ಹೊರಟ ಮಂಗಳರೇಖೆಗಳು ಜೀವರೇಖೆ ಮತ್ತು B. D ರತಿರೇಖೆಯನ್ನು ಭೇದಿಸಿರುವುದರಿಂದ ದುರ್ಗುಣಗಳುಳ್ಳವಳೂ ಮತ್ತು ಪತಿಯನ್ನು ದ್ವೇಷಿಸುವವಳೂ ಆದ ಪತ್ನಿಯನ್ನು ಹೊಂದಿ ಕೊನೆಗೆ ನ್ಯಾಯಾಲಯದ ಮೂಲಕ ಆ ಪತ್ನಿಯನ್ನು ತೊರೆಯುವನು. ರತಿರೇಖೆಗಳು ಎರಡು ಕಾಣುವುದರಿಂದ ಎರಡನೆಯ ವಿವಾಹವಾಗುವುದು. ಆದರೂ ವ್ಯಕ್ತಿಗೆ ಅಶಾಂತಿ; ಇದಕ್ಕೆ ರತಿರೇಖೆಯು ಅಸ್ಪಷ್ಟವಾಗಿರುವುದೇ ಕಾರಣ.

೪೯ ನೆಯ ಚಿತ್ರದಲ್ಲಿ C, D, E, F ರೇಖೆಗಳು ಅತಿ ದಪ್ಪವಾಗಿರುವುವು ಮತ್ತು ಅಂಗುಷ್ಠವು ಕಂಬದಂತೆ ನೇರವಾಗಿ ನಿಂತಿರುವುದು. G ಮಾಲಿಕಾರೇಖೆ C ಗೋಧಿರೇಖೆಗಳಲ್ಲಿ ಮಣಿಗಳ ಚಿಹ್ನೆಯೂ ಇಲ್ಲ. ಇದರಿಂದ ಕೋಪ, ಹಟ ಹೆಚ್ಚು. ರತಿರೇಖೆಯು [ A· B ] ಭಿನ್ನವಾಗಿರುವುದು; ಇದು A· B ಕಡೆಯಿಂದ ಕೆಲವು ದೂರದ ವರೆಗೆ ಒಡೆದಿರುವುದು. ಇದರಿಂದ ವ್ಯಕ್ತಿಗೆ ೩೭, ೩೮ರ ವರೆಗೆ ಕಷ್ಟಕಾಲವು. ಅವಿವಾಹಿತ ಜೀವನ, ಶ್ರಮ ಹೆಚ್ಚು, ಲಾಭ ಕನಿಷ್ಟ, ನಂತರ ಸಂಸಾರಸುಖ. [ ರತಿರೇಖೆಯು ದ್ವಿತೀಯಾರ್ಧದಿಂದ ಶುಭವಾಗಿದೆ] ಆದರೂ ಬಡತನದ ಜೀವನ, ಸ್ಥಿರ ಕೇಸರ, ತಾರಾ, ಗೋಧಿ ಚಿಹ್ನೆಗಳು ಇಲ್ಲವಾದ್ದರಿಂದ ಕಷ್ಟದವೃತ್ತಿಗಳಿಂದ ಜೀವನ.

ಈ ಚಿತ್ರದಲ್ಲಿರುವಂತೆ ರೇಖೆಗಳು ಅತಿ ದಪ್ಪವಿದ್ದು ಶುಭಚಿಹ್ನೆಗಳೇ ಇಲ್ಲವಾದರೆ ಇಂತಹ ವ್ಯಕ್ತಿಗಳು ಯಂತ್ರದಂತೆ ಅಂತ್ಯದ ವರೆಗೆ ಜೀವನ ಸಾಗಿಸುವರು. ಅವಿದ್ಯಾವಂತರೂ, ಮೂಢರೂ ಆಗಿರುತ್ತಾರೆ.

ಚಿತ್ರ ೫೯ A, B ಗೋಧಿರೇಖೆ ಸಾರಹೀನವಾಗಿರುವುದು ಮತ್ತು C, E, D ಭಾಗಗಳಲ್ಲಿರುವ ಉದ್ದನೆಯ ಕೇಸರರೇಖೆಗಳು ಭಗ್ನವಾಗಿವೆ. [Dented lines ] ಮಾಲಿಕಾ ರೇಖೆಯು ಅತಿ ಸಣ್ಣದಾಗಿಯೂ ಚಿಕ್ಕ ಚಿಕ್ಕಗಳಾಗಿಯೂ ಇರುವುದು. ಇದರಿಂದ ವ್ಯಕ್ತಿಯು ಬಾಲ್ಯದಿಂದಲೇ ಪರಸ್ಥಳಗಳಲ್ಲಿ ಅಲೆಯುವನು, ಸೇವಕವೃತ್ತಿಯನ್ನು ಹಿಡಿಯುವನು. D ಕಡೆಯಿಂದ ಸಾಗಿರುವ ರತಿರೇಖೆಯೂ ಭಿನ್ನವಾಗಿರುವುದು. ಇದರಿಂದ ಅವಿವಾಹಿತ ಜೀವನ. ಜೀವನದಲ್ಲಿ ಎಲ್ಲ ಆಸೆಗಳನ್ನೂ ತೊರೆದು ಕರ್ಮ ಕಳೆಯುವುದೇ ಈ ವ್ಯಕ್ತಿಯ ದಿನಚರಿಯಾಗುವುದು.

ಚಿತ್ರ ೬೦ A, B ಗೋಧಿರೇಖೆಯು ಡೊಂಕಾಗಿರುವುದು. ಆದರೆ A ಕಡೆಯಿಂದ ಸ್ವಲ್ಪ ದೂರದ ವರೆಗೆ ಅಲ್ಪ ಸ್ವಲ್ಪ ಶುಭವಾಗಿ ಕಾಣುವುದು. ೨೮ನೆಯ ವಯಸ್ಸಿನ ವರೆಗೆ ಸುಖ, ಸರ್ಕಾರ-ಮಿತ್ರರುಗಳಿಂದ ಸಹಾಯ.

ನಂತರ ಈ ರೇಖೆಯು ಭಿನ್ನವಾಗಿಯೂ, ಡೊಂಕಾಗಿಯೂ ಇರುವುದರಿಂದ ವಿದ್ಯಾಭಂಗ, ಹಣಕ್ಕಾಗಿ ಮಾಡಿದ ಪ್ರಯತ್ನವೆಲ್ಲಾ ಭಂಗ. D C ಮಧುರ ರೇಖೆಯು ಉದ್ದವಾಗಿಯೂ, ಡೊಂಕಾಗಿಯೂ ಇರುವುದರಿಂದ ವ್ಯಕ್ತಿಯು ಪರಿವೀಕ್ಷಕ, ಆದರೆ ಚಂಚಲಸ್ವಭಾವ. E ರತಿರೆ ಖೆಯು ಶಾಖಿನ ಬಾಲವಂತೆಯೂ H ಶತ್ರುರೇಖೆ ವೃಕ್ಷಾಗೊಳಗಾಗಿರು-ವುದು. E ಕಡೆಗೆ ಸಾಗಿರುವ ಭಿನ್ನವಾಗಿಯೂ ಮತ್ತು ಮಾಸಲಾಗಿಯೂ ಇರುವುದು. ಇದರಿಂದ ವಿವಾಹಕ್ಕಾಗಿ ಸತತ ಪ್ರಯತ್ನ ಮಾಡಿ ಭಂಗವಾಗಿದೆ.

G ಮಣಿಮಾಲಿಕಾರೇಖೆಯು ಒರಟಾಗಿಯೂ, ಸೀಳುಗಳಾಗಿಯೂ ಮತ್ತು ಕತ್ತರಿಸುವುದು ಪುಷ್ಪದ್ದಾಗಿಯೂ ಇರುವುದರಿಂದ ವ್ಯಕ್ತಿಯು ಹುಟ್ಟಿದ ಊರಿನಲ್ಲಿ ಇದ್ದ ಅಲ್ಪ ಸ್ವಲ್ಪ ಭೂಮಿ, ದ್ರವ್ಯವನ್ನು ಹಾಳು ಮಾಡಿ, ಅಪವಾದ ಪಡೆದು, ನೀಚಸ್ತ್ರೀಸಹವಾಸ ಮಾಡಿ, ಅನೇಕ ದುಷ್ಟ

ರೋಗಗಳನ್ನು ಅನುಭವಿಸುವನು. ಕೊನೆಗೂ ಸಹ ಭಿಕಾರಿಯಾಗಿ ವಿಕಾರ ರೂಪವನ್ನು ಹೊಂದುವನು.

[Late Marriage] ಚಿತ್ರ ೬೪ ಲಗ್ನದಲ್ಲಿ ರಾಹುಗ್ರಹವಿರುವುದರಿಂದ ಬಿಳಿ ಛಾಯಾರೇಖೆ [White shade entering to the top of the whirle] ಹಾವಿನ ಬಾಲದಂತೆ ಸುರುಳಿಯ ಶಿರ ಮೂಲಕ್ಕೆ ಸಾಗಿದೆ. ಅಂಗುಷ್ಠದ ಎರಡನೆಯ [In logice portion] ಅಂತರದಲ್ಲಿರುವ ಕೇಸರ ರೇಖೆಗಳು ಅದರ ಕೆಳಗಿರುವ C, B ರೇಖೆಯೂ ಮತ್ತು D. C ವಣಾಲಿಕಾ ರೇಖೆಯೂ ಪುರಚಲುರೇಖೆಗಳಂತಲೂ ಕಚ್ಚು ಕಚ್ಚಾಗಿಯೂ [Dented] ಮತ್ತು A, B ಗೋಧಿರೇಖೆಯು ಭಿನ್ನವಾಗಿಯೂ ಇರುವುದು. ಇದರಿಂದ ವ್ಯಕ್ತಿಗೆ ಮನೆತನದ ಐಶ್ವರ್ಯಗಳಿಷ್ಟಿದ್ದರೂ ಪಿತೃ, ಭ್ರಾತೃಗಳೇ ವೈರಿಗಳಾಗುವುದರಿಂದ ಈತನಿಗೆ ಲಾಭವಾಗುವುದಿಲ್ಲ. B. D ಮಧ್ಯದಲ್ಲಿರುವ C ರತಿರೇಖೆ ಪ್ರಥಮದಲ್ಲಿ ಭಿನ್ನವಾಗಿ ಮಧ್ಯದ ನಂತರ ಅಲ್ಪ ಶುಭವಿರುವುದರಿಂದ ೩೮, ೪೦ರಿಂದ ಸ್ತ್ರೀ ಸುಖವು. E ನೇರದಿಂದ D ವರೆಗೆ ಅಲ್ಪ ಮೀನಿನ ಆಕಾರವಿರುವುದರಿಂದ ೪೦ ರಿಂದ ಸಂಸಾರ–ಸಂಪಾದನೆಯು ಇರುವುದು.

ಚಿತ್ರ ೬೬ A ಯಿಂದ E ವರೆಗಿನ ಭಾಗದಲ್ಲಿ ತಾರಾ ಕೇಸರ ರೇಖೆಗಳಲ್ಲಿ [Dented skin ridges] ಭಿನ್ನವಾದ ಚರ್ಮದ ಪದರ ಕು. ವ್ಯಕ್ತಿಯು ಬಾಲ್ಯದಲ್ಲಿ ಮಹತ್ತರ ಸ್ರಾವ ಅನುಭವಿಸಿದ ಗುರುತು. F ರೇಖೆಯು ಭಿನ್ನವಾಗಿರುವುದರಿಂದ ಅವಿದ್ಯಾವಂತ ಮತ್ತು E ಭಾಗದಿಂದ ಹೊರಟಿರುವ ರತಿರೇಖೆಯು ಮೋಡಾಗಿ ದಪ್ಪವಾಗಿ ಇರುವುದು. ಬಾಣದ [Arrow sign] ಗುರುತಿನ ಭಾಗದಲ್ಲಿ ವಣಾಲಿಕಾ ರೇಖೆಯು ಕಡೆಯಿಂದ ಹೊರಟಿರುವ [Line of Ripu] [ರಿಪು] ಶತ್ರು ರೇಖೆಯು G,E ರತಿರೇಖೆಯನ್ನು ಭೇದಿಸಿ ಮೇಲೆ ಸಾಗಿದೆ. ಇದರಿಂದ ಪ್ರಥಮ ಪತ್ನಿಯು ಅಪಘಾತದಿಂದ ವ್ಯಕ್ತಿಯ ೩೭ನೆಯ ವಯಸ್ಸಿನಲ್ಲಿ ಪ್ರಾಣಬಿಡುವಳು.

ದ್ವಿತೀಯ ಭಾಗದಲ್ಲಿ [G, F ತ್ರಿಕೋಣಸೂಚಕ] ಅಲ್ಪ ಶುಭ. ಎರಡು ಕೇಸರರೇಖೆಗಳು ಇರುವುದರಿಂದ ೪೦ನೆಯ ವಯಸ್ಸಿನಲ್ಲಿ ಎರಡನೆಯ ಮದುವೆಯಾಗಿ ಸುಖಜೀವಿಯಾಗಿರುವನು ಆದರೆ ಶತ್ರುರೇಖೆಯು B. C ಅನ್ನರೇಖೆಯ ವರೆಗೆ ಸಾಗಿರುವುದರಿಂದ ವ್ಯಕ್ತಿಗೆ ನರಗಳ ನಿಶ್ಶಕ್ತಿ ರೋಗ ಬಾಧೆ, ಶತ್ರುಕೃತ್ಯ ಇದ್ದೇ ಇರುವುದು.

ಚಿತ್ರ ೭೯ ಈ ಚಿತ್ರದಲ್ಲಿ ಕಾಲಮಿತಿಯನ್ನು ಸೊನ್ನೆ [0] ಗುರುತಿನಿಂದ ಸುರುವುಮಾಡಿ ೭೦ರ ವರೆಗೆ ತೋರಿಸಿರುವುದು. ಈ ರೇಖೆಯನ್ನು ಅಳೆಯುವ ವಿಧಾನ—ಸೊನ್ನೆಯಿಂದ ೧೮ರ ವರೆಗೆ ಬಂದ ರೇಖೆಯು ಭಿನ್ನವಾಗಿದೆ. ೧೮ನೆಯ ವಯಸ್ಸಿನಲ್ಲಿ ವ್ಯಕ್ತಿಯು ಹುಟ್ಟಿದ ಸ್ಥಳಬಿಟ್ಟ ಗುರುತು. ೧೮ರಿಂದ ೩೨ನೆಯ ವಯಸ್ಸಿನ ವರೆಗೆ ಕಷ್ಟಾರ್ಜಿತ ಸಂಪಾದನೆ, ಆದರೆ ೩೮ನೆಯ ವಯಸ್ಸಿನಲ್ಲಿ ಉಪರೇಖೆಯು ಅಲ್ಪ ಸಹಾಯಕ್ಕೆ ಬಂದಿದೆ. ಅಲ್ಲಿ [ಮಣಿ] ಗೆ ಸಂಧಿಯಾಕಾರ ಸುರುವಾಗಿ ವ್ಯಕ್ತಿಗೆ ಉನ್ನತವೃತ್ತಿ. ಸುಖವಾದ ಸಂಪಾದನೆ, ಸಂಸಾರವನ್ನು ಪೂರ್ವಪುಣ್ಯ ಕೊಟ್ಟಿರುವುದು. ೩೮ನೆಯ ವಯಸ್ಸು—ಈ ಕಾಲದಿಂದ ವಾಹನ, ಐಶ್ವರ್ಯ, ಗೃಹ, ಭೂಮಿ ಲಾಭಗಳು, ಕೀರ್ತಿಯು ಉಂಟಾಗಿರುವುದು. A ಯಿಂದ B ವರೆಗೆ ಅಡ್ಡರೇಖೆಗಳಾದ ಮಧುರ-ಮನ-ರೇಖೆಗಳು ಅಲ್ಪ ಶುಭ. ಇದರಿಂದ ವಿದ್ಯಾವಂತ. ಆದರೆ B ರೇಖೆ ಅಲ್ಪಸ್ವಲ್ಪ ಭಂಗ—ಸಂಸಾರದಲ್ಲಿ ಆಗಾಗ್ಗೆ ಬೇಸರ, ಮನಸ್ತಾಪ.

ಚಿತ್ರ ೮೦ [ Murderer] ಅಂಗುಷ್ಠವು ಉದ್ದವಾಗಿಯೂ, ದಪ್ಪವಾಗಿಯೂ ಇರುವುದು. ಮತ್ತು ಹಿಂಬದಿಗೆ ಸ್ವಲ್ಪವೂ ಬಾಗುವುದಿಲ್ಲ. ಒರಟಾಗಿರುವುದು [ Blunt ]. ಉಳಿದ ಬೆರಳು ಉದ್ದವಾಗಿರುವುವು. ೧ ರಿಂದ ೨ ಈ ರೇಖೆಯಿಂದ ಹಾವಿನ ಮರಿಗಳು ಭೂಪದರಗಳ ಮೇಲೆ ಬಾಯಿಬಿಟ್ಟು ಸಾಗುತ್ತಿರುವುವು. ೩ ಮಧುರ ಮನ ರೇಖೆಗಳು ಮೊಟಕಾಗಿರುವುದರಿಂದ ವ್ಯಕ್ತಿಯು ಅವಿದ್ಯಾವಂತನೂ, ಕಟು—ಅಂಗುಷ್ಠ ಒರಟಾಗಿರುವುದರಿಂದ [Blunt] ಹಟ, ಛಲವುಳ್ಳ ಮೂರ್ಖನೂ ಆಗಿರುವನು. ಮಾಲೀಕರೇಖೆಯು ವಕ್ರವಾಗಿಯೂ, ಮರದ ಬೇರಿನಂತೆಯೂ ಇರುವುದರಿಂದ ಕಷ್ಟಾರ್ಜಿತದಿಂದ ಜೀವನವು. ಗೋಧಿರೇಖೆಯ ಮೇಲೆ ಇರುವ ಭೂತವರ್ತರೇಖೆಗಳು ಸರ್ಪದ ಮರಿಯಂತೆಯೂ, ರತಿರೇಖೆಯು [೪] ಒರಟಾಗಿ ಇರುವುದರಿಂದ ವೇಶ್ಯಾಗುಣವುಳ್ಳ ಪತ್ನಿಯು ಇರುವಳು. ಈ ವ್ಯಕ್ತಿಯು ಸಂಬಂಧಿಕರನ್ನು ಚಿತ್ರವಿಚಿತ್ರವಾಗಿ ಕತ್ತರಿಸಿ ಸೆರೆವಾಸ ಅನುಭವಿಸುವನು. ವ್ಯಕ್ತಿಯು ನೋಡಲು ರಾಕ್ಷಸನಂತೆ ಕಾಣುವನು.

ಚಿತ್ರ ೮ ಈ ಚಿತ್ರದಲ್ಲಿ F. B ರೇಖೆಯು ತನ್ನ ಅಕ್ಷದಲ್ಲಿ ಸರಿಯಾಗಿ ಮೂಡಿಲ್ಲ [ F ಕಡೆಯಿಂದ ] ಸುರುವಿನಿಂದ ಈ ರೇಖೆಯು ಮೋಟಕಾಗಿದೆ. ಮತ್ತು ಸುರುವಿನಲ್ಲಿ ಇರಬೇಕಾದ ಭಾಗವು ಭಿನ್ನವಾಗಿ A. F ಮಧ್ಯದಲ್ಲಿ ಕಿರುರೇಖೆಯಾಗಿ ಕಾಣುವುದು. ಇದರಿಂದ ವ್ಯಕ್ತಿಯು ಅತಿ ಬಾಲ್ಯದಲ್ಲಿಯೇ ಹುಟ್ಟಿದ ಮನೆ ಬಿಟ್ಟು ಪರರ ಮನೆ ಸೇರಿ [ದತ್ತುಪುತ್ರನಾಗಿ] ಬೆಳೆಯುವನು. F ಕಡೆಯಿಂದ ಸ್ವಲ್ಪ ದೂರದ ವರೆಗೆ ಸ್ಪಷ್ಟವಾಗಿ ರೇಖೆಯು ಕಾಣುವುದು. ಬಾಲ್ಯದಿಂದ ವ್ಯಕ್ತಿಯು ರಾಜಾಧಿರಾಜರುಗಳಲ್ಲಿ ಸನ್ಮಾನ ಪಡೆಯುವನು. G ಮಧುರರೇಖೆಯು ಉದ್ಭವಿರುವುದರಿಂದ ವಿದ್ಯಾವಂತನೂ, ಮೇಧಾವಿಯೂ, ಕೇಸರರೇಖೆಗಳು ಇರುವುದರಿಂದ ಸುಖಿಯೂ ಆಗಿರುವನು.

F. B ರೇಖೆಯನ್ನು ಮೂರುಭಾಗ ಮಾಡಿದಾಗ—ಪ್ರಥಮದಲ್ಲಿ ಅಂದರೆ ೬ನೆಯ ವಯಸ್ಸಿನಿಂದ ೩೨ರ ವರೆಗೆ ಮಹತ್ತರ ರಾಜಭೋಗ, ಕೀರ್ತಿಯೂ ದ್ವಿತೀಯ ಭಾಗದಲ್ಲಿ ೩೩ರಿಂದ ೫೬ನೆಯ ವಯಸ್ಸಿನೊಳಗೆ ತಂದೆ-ತಾಯಿಗಳಿಂದ ಮತ್ತು ಅನಾಯಾಸವಾಗಿ ಲಭಿಸಿದ್ದ ಐಶ್ವರ್ಯ, ಮನೆ, ಆಸ್ತಿಗಳೆಲ್ಲಾ ವ್ಯಯವಾಗಿ ೩ನೆಯ ಸ್ಥಳಕ್ಕೆ ಕುಟುಂಬಸಮೇತನಾಗಿ ಸಾಗುವನು.

F. B ರೇಖೆಯ ಮೇಲೆ ಬಾಯಿಬಿಟ್ಟು ಇರುವ ರೇಖೆಯು ವ್ಯಕ್ತಿಯ ಮೂರ್ಖತನವನ್ನು, ಅಹಂಭಾವವನ್ನು, ಪಾಪಕಾರ್ಯ ಮಾಡುವ ಗುಣವನ್ನು ತಿಳಿಸುವುದು.

ಬಾಯಿಬಿಟ್ಟಿರುವ ಮುಳ್ಳಿನಂತಹ ರೇಖೆಯಿಂದ B ವರೆಗೆ ಸ್ಪಷ್ಟವಾಗಿರುವುದರಿಂದ ಮೂರನೆಯ ಸ್ಥಳದಿಂದ ಸಂಪಾದನೆಯು; ೫೭ ರಿಂದ ೮೦ನೆಯ ವಯಸ್ಸಿನ ವರೆಗೆ ಸಂತತಿಯಿಂದ ಸುಖವು, ಶಾಂತಿಯು ಇರುವುದು. D ರತಿರೇಖೆ ಸುರುವಿನಲ್ಲಿ ಅಲ್ಪ ಮಂಕಾಗಿದೆ. ಅಂತ್ಯದ ಕಡೆಗೆ ದ್ವೀಪ ಮತ್ತು ಭಿನ್ನವೂ ಆಗಿದೆ. ಪ್ರಥಮದಲ್ಲಿ ಪತ್ನಿಸುಖವಿಲ್ಲ, ದ್ವಿತೀಯ ಭಾಗದಿಂದ ಸುಖ. ದ್ವೀಪವಿರುವುದರಿಂದ ಪತ್ನಿಗೆ ಗರ್ಭಪಾತ, ವಾಯು ರೋಗದ ತೊಂದರೆ [ಪತ್ನಿರೇಖೆ] ರತಿರೇಖೆಯ ಮೇಲಿದ್ದ ಕೇಸರರೇಖೆಗಳು ಅತಿಯಾಗಿ ಮೇಲೆ G ವರೆಗೆ ಸಾಗಿರುವುದರಿಂದ ಸ್ತ್ರೀಮೂಲಕ ವಿಶೇಷ

ದ್ರವ್ಯ; ಈ ರೇಖೆಗೆ ಉಪರೇಖೆಗಳ ಸಮಾಗಮವಿರುವುದರಿಂದ ವ್ಯಕ್ತಿಗೆ ಅಸಂಖ್ಯಾತವಾದ ಸ್ತ್ರೀಸುಖ, ಪ್ರಾಯದಲ್ಲಿ ಮಾಗಿದಿರುವುದು.

H ಮಣಿಕಾರೇಖೆಯು ಮೊದಲಿನಿಂದ ಅಂತ್ಯದ ವರೆಗೆ ಏಣಿನ ರೂಪವನ್ನು ಹೊಂದಿರುವುದರಿಂದಲೂ, ಗೋಧಿರೇಖೆಯು A.B.C ತ್ರಿದಳವಾಗಿರುವುದರಿಂದಲೂ ವ್ಯಕ್ತಿಯು ಗಂಧರ್ವ ಕಲೆಯಿಂದ ಜೀವನ ಸಾಗಿಸುವನು.

ಚಿತ್ರ ೮೩—C, B ಮತ್ತು F, D ರೇಖೆ ಅತಿ ದೂರ ದೂರವಾಗಿರುವುವು. C, B ರೇಖೆಯ ಮೇಲೆ ಮೊಟಕುಮೊಟಕಾಗಿರುವ ಮುಳ್ಳಿನಂತಹ ಮೂರು ರೇಖೆಗಳು ಇರುವುವು. ಈ ರೇಖೆಗಳು ವ್ಯಕ್ತಿಯನ್ನು ಕಟುಕನನ್ನಾಗಿ ಪರಿವರ್ತಿಸುವುವು. B ಕಡೆಯಿಂದ ಮಧ್ಯದಲ್ಲಿ ತುಂಡಾಗಿರುವುದು. ಅದೇ ರೇಖೆಯ ನೇರದಲ್ಲಿ A ಕಡೆಯಿಂದ E ವರೆಗೆ ಇರಬೇಕಾದ ರತಿರೇಖೆ ಪ್ರಥಮದಲ್ಲಿ ಭಂಗವಾಗಿರುವುದು. ವ್ಯಕ್ತಿಯು ಪ್ರಥಮ ಪತ್ನಿಗೆ ಪ್ರತಿದಿನವೂ ತಪ್ಪದೆ ವಿಚಿತ್ರ ಶಿಕ್ಷೆ ಕೊಡುವನು. ಕೊನೆಗೆ ವಿಷ ಹಾಕಿ ಪ್ರಾಣವನ್ನೇ ತೆಗೆಯುವನು. ಅವಳು ಪ್ರಾಣಬಿಡುವಾಗ ಪತಿಯು ಹಾಳಾಗಲೆಂದು ಶಪಿಸುವಳು. ವ್ಯಕ್ತಿಗೆ ದ್ವಿತೀಯ ವಿವಾಹವಾಗುವುದು. ಆದರೆ ಪತ್ನಿಗೆ ಪ್ರತಿದಿನವೂ ಘೋರವಾದ ರೋಗವು, ಸಂಸಾರಸುಖ ಕನಸಾಗಿ ಹೋಗುವುದು. ರೋಗದಿಂದಲೇ ಪತ್ನಿಯ ಕೊನೆ. ಪತಿಯು ಪತ್ನಿಯ ಸರ್ವಸೇವಾಸಕ್ತನಾಗಿ ವಂಶವೃದ್ಧಿಯೂ ಆಗದೆ ವ್ಯರ್ಥ ಜೀವನ ಸಾಗಿಸುವನು. ಪ್ರಥಮ ಪತ್ನಿಯು ಕೊಟ್ಟ ಶಾಪ ಸತ್ಯವಾಗಿ ಹೋಗುವುದು.

B, C ರೇಖೆಯನ್ನು ೨ ಭಾಗ ಮಾಡಿದಾಗ B ಭಾಗ ಅಲ್ಪ ಕಾಂತಿಯುತವಾಗಿಯೂ, C ಭಾಗದಲ್ಲಿ ಮಾಸಲಾಗಿಯೂ ಇರುವುದು. G ಮಣಿಕಾರೇಖೆಯು ಭಿನ್ನಭಿನ್ನವಾದ ಮಣಿಯನ್ನು ಹೊಂದಿರುವುದರಿಂದ ವ್ಯಕ್ತಿಯು ಸಾಮಾನ್ಯಜೀವಿ.

ಚಿತ್ರ ೬೦ A ಕಡೆಯಿಂದ ಹೊರಟ ಗೋಧಿರೇಖೆ, ಮಧ್ಯದ ವರೆಗೆ ಅತಿ ದಪ್ಪವಾಗಿರುವುದು. ಬಾಲ್ಯದಿಂದ ೪೮, ೫೦ನೆಯ ವಯಸ್ಸಿನ ವರೆಗೆ ಶ್ರಮಜೀವನ. G ಕಡೆಯಿಂದ ಹೊರಟ ಬಿಳಿಲುರೇಖೆ (ಅಥವಾ ಇಳಿಗೂಖದ ಒಂದು ರೇಖೆ) H ರೇಖೆಯನ್ನು ಕುಟುಕಿರುವುದು. ಇದರಿಂದ

ವ್ಯಕ್ತಿಗೆ ಅಂತ್ಯದಲ್ಲಿ ಪಾರ್ಶ್ವವಾಯುರೋಗ. ಪ್ರಥಮದಿಂದ (D ರತಿರೇಖೆ) ಸ್ವಲ್ಪ ಶುಭವಿದ್ದು D ರತಿರೇಖೆಯು F ಬಾಣದ ಗುರುತಿನ ಕಡೆಯಿಂದ D ವರೆಗೆ ಭಿನ್ನಭಿನ್ನವಾಗಿರುವುದರಿಂದ ೫೩ ರಿಂದ ೫೭ ರೊಳಗೆ ಪತ್ನಿಯನ್ನು ಕಳೆದುಕೊಳ್ಳುವನು. C ಮಧುರ ಮನರೇಖೆಗಳು ಮೊಟಕಾಗಿರುವುದು ಅಲ್ಪವಿದ್ಯೆಯನ್ನು ಹೇಳುವುದು.

ಚಿತ್ರ ೧೦೮ ಇದರಲ್ಲಿ N. R ಚಿತ್ರದಲ್ಲಿ A. D ರೇಖೆಯು B. C ರೇಖೆಯನ್ನು ಭೇದಿಸಿದೆ. ಇದರಿಂದ ಸಂಸಾರಭಂಗ (ಪತಿವಿಯೋಗ). F ರೇಖೆಯು ಸುರುವಿನಿಂದ ಮೊನಚಾಲದಾಕಾರವಾಗಿ, E ಬಳಿಯಲ್ಲಿ ಬಾಯಿಬಿಟ್ಟು ಸರ್ಪದಾಕಾರವನ್ನು ಹೊಂದಿರುವುದು. ಇದರಿಂದ ವಿವಾಹವಾದ ಒಂದು ಅಥವಾ ಎರಡು ವರ್ಷದೊಳಗೆ ಪತಿವಿಯೋಗ. ಭೂಭಾಗದಲ್ಲಿ ಮುಳ್ಳಿನ ರೇಖೆ ಪತಿ ಸತ್ತನಂತರ ಪತಿಯ ಊರಿನವರಿಂದ ಮಹತ್ತರ ಶತ್ರುತ್ವ; ಶಂಖ, ಚಕ್ರಾಕಾರಗಳು ಧೂಮ್ರವರ್ಣವಾಗಿರುವುದರಿಂದ ಜೀವನವೇ ಅಶಾಂತಿಮಯ. H. G ಗೋಧಿರೇಖೆ ಅಸ್ಪಷ್ಟ—ಇದರಿಂದ ಆತಂಕದಿಂದ ಜೀವನ. J ಪತಿರೇಖೆ ಮೊಂಡಾಗಿರುವುದು. ೯ ಕಡೆಯಿಂದ ಹೊರಟ ಶತ್ರುರೇಖೆ J ರೇಖೆಯನ್ನು ಭೇದಿಸಿರುವುದರಿಂದ ಪತಿಗೆ ಅಪಮೃತ್ಯು. ಆದರೆ ಅಲ್ಪ ಕೇಸರರೇಖೆಗಳು ಇರುವುದರಿಂದ ಊಟ, ತಿಂಡಿ, ಬಟ್ಟೆಗೆ ದೈವಿಕ ಸಹಾಯ.

T. H ಚಿತ್ರದಲ್ಲಿ A ರೇಖೆ ಮತ್ತು ಅದರ ಕೆಳಭಾಗದ ರೇಖೆ. D ಕಡೆಯಿಂದ ಸಾಗಿರುವ ರೇಖೆಗಳು ಸುಳಿಯನ್ನು ಭೇದಿಸಿರುವುವು. ಅಶುಭ, ಸಂಸಾರಭಂಗ, ಪತಿವಿಯೋಗವನ್ನು ತಿಳಿಸುವುದು. E. F ರೇಖೆಯು ಅಂಕುಡೊಂಕಾಗಿರುವುದು. ಇದರಿಂದ ಮೇಲೆ ಹೇಳಿದ ಪಾಪ ಫಲ, ಪೂರ್ವಕರ್ಮ ಅನುಸರಿಸಿ ಇರುವುದು. ಆದರೆ E. F ರೇಖೆಯು ಸುರುವಿನಿಂದ ಅಂತ್ಯದವರೆಗೆ ಇರುವುದರಿಂದ ತಂದೆ, ಭ್ರಾತೃಗಳ ಕಡೆಯಿಂದ ಶುಭವಿರುವುದು. (ಸಹಾಯವೂ ಇರುತ್ತದೆ).

S. E ಮತ್ತು M. A ರೇಖೆಗಳಲ್ಲಿ ಹಾಳುಹಾಳು ಸುರಿಯುವಂತೆ ಎನಿಸಿರುವ ರೇಖೆಗಳು ನತದೃಷ್ಟತ್ವವನ್ನು ಸೂಚಿಸುತ್ತವೆ.

ಚಿತ್ರ ೮೮ A. B ದ್ವಿದಳವಾದ ರೇಖೆಯು ಸುರುವಿನಲ್ಲಿಯೇ ಎರಡು ಭಾಗವಾಗಿರುವುದು. A ರೇಖೆಯು ಮಾಳ್ವಿನಂತೆಯೂ, B ರೇಖೆಯು ಅಂತ್ಯದಲ್ಲಿ ( H ಗೀಟಿನ ಬಳಿ) ಟಿಸಿಲೊಡೆದಿರುವುದರಿಂದ ಬಾಲ್ಯದಲ್ಲಿಯೇ ಪೋಷಕರ ವಿಯೋಗವು. ೩೬ ರಿಂದ ೩೭ರೊಳಗೆ ಪತ್ನೀವಿಯೋಗವು. A, B ರೇಖೆಯು ತಟಸ್ಥವಾಗಿ ಈ ಎರಡು ರೇಖೆಯ ಮಧ್ಯದಿಂದ ಒಂದು ಉಪ-ರೇಖೆಯು ಹೊರಟಿರುವುದರಿಂದ ಸ್ಥಳ, ವೃತ್ತಿ ಬದಲಾವಣೆಯು ಉಂಟಾಗು-ವುದು. H ಶಿರದಲ್ಲಿರುವ ಅಡ್ಡವಾದ ರತಿರೇಖೆಯು ದ್ವಿತೀಯ ಭಾಗದಲ್ಲಿ ಅಲ್ಪ ಶುಭವಿರುವುದು. ಮತ್ತು D ವಜ್ರಾಲಿಕಾರೇಖೆಯು ಕಡೆಯಿಂದ ಹೊರಟ ಭಾಗ್ಯರೇಖೆ, ಯೋಗರೇಖೆ F ನುಧುರ ಮೂಂದಿರ ರೇಖೆಗಳ ವರೆಗೆ ಸಾಗಿರು-ವುದು; ಇದರಿಂದ ದ್ವಿತೀಯ ವಿವಾಹವಾದ ನಂತರ ವ್ಯಕ್ತಿಗೆ ಭಾಗ್ಯ, ಕೀರ್ತಿ, ಸುಖ, ವಂಶವೃದ್ಧಿಯು ಲಭಿಸುವುದು.

E ಭಾಗದಲ್ಲಿ ನಕ್ಷತ್ರ ಗುರುತು ಮತ್ತು ಮೊಂಡಾದ ರೇಖೆಗಳು ಇರುವುದರಿಂದ ವ್ಯಕ್ತಿಗೆ ೫೫, ೫೭ನಯ ವಯಸ್ಸಿನಿಂದ ನರಗಳ ನಿಶ್ಶಕ್ತಿ, ಉದರಬೇನೆ ಮತ್ತು ದ್ವಿತೀಯ ಪತ್ನಿಗೂ ಅಲ್ಪ ಆಯುವು ಇರುವುದೆಂದು ತಿಳಿಯುವುದು.

ಚಿತ್ರ ೯೦ X. Y. B ಗುರುತಿನ ಭಾಗದದಿಂದ X. Y ಗುರುತಿನ ವರೆಗೆ ಅಂಗುಷ್ಠದ ಮುಖ, ಶಿರಭಾಗವು ತಟ್ಟೆಯಂತೆ ಅಗಲವಾಗಿರುವುದು. ಇದರಿಂದ ವ್ಯಕ್ತಿಯು ಸಧಾನಿ, ಅಸಾಧ್ಯವಾದ ಬುದ್ಧಿಶಕ್ತಿ; E ಶಿರದ ಮೇಲೆ ಇರವ ಮಧುರ ರೇಖೆಯು ಭಿನ್ನವಾಗಿದೆ. ಮಧ್ಯಮ ವಿದ್ಯೆಯಾದರೂ ಬುದ್ಧಿವಂತನು; H ಮತ್ತು A ರೇಖೆಗಳು I ಕಡೆಗೆ ಸಾಗಿರುವುವು. ಇದರಿಂದ ವ್ಯಕ್ತಿಗೆ ಇರುವ ವಿಶೇಷ ಭಾಗ್ಯ, ಸುಖವನ್ನು ತಿಳಿಸುವುದು.

B ಮತ್ತು C,D ಗೋಧಿರೇಖೆಗಳು ತಮ್ಮ ಅಕ್ಷವನ್ನು ಬಿಟ್ಟು ಸಾಗಿ-ರುವುವು ಇದರಿಂದ ವ್ಯಕ್ತಿಯು ಹುಟ್ಟಿದ ಊರನ್ನು ಬಿಟ್ಟು ಪರಸ್ಥಳದಲ್ಲಿ ಲಕ್ಷಾಂತರ ರೂಪಾಯಿಗಳ ಆಸ್ತಿ, ಐಶ್ವರ್ಯ, ಕೀರ್ತಿ ಸಂಪಾದಿಸುವನು.

B ಯಿಂದ ಸುರುವಾದ ಗೋಧಿರೇಖೆಯನ್ನು H ರೇಖೆಯು ಕತ್ತರಿ-ಸಿರುವುದು. ವ್ಯಕ್ತಿಯು ಪ್ರಥಮ ಪತ್ನಿಯನ್ನು ಕಳೆದುಕೊಂಡ ಗುರುತು. ಅದೇ ವೇಳೆಯಲ್ಲಿ D ರೇಖೆಯು ಸುರುವಾಗಿರುವುದು. ದ್ವಿತೀಯ ಪತ್ನಿಯ

ಭಾಗ್ಯ (ಎರಡನೆಯ ವಿವಾಹ) ಈ ಚಿತ್ರದಲ್ಲಿರುವಂತೆ ದೂರ ದೂರವಾದ ಮೂರು ಗೋಧಿರೇಖೆಗಳು ವ್ಯಕ್ತಿಗಳ ಹಸ್ತದಲ್ಲಿ ಇದ್ದರೆ, ಅವರುಗಳು ಇಬ್ಬರು ಪತ್ನಿಯರಿಗಿಂತ ಹೆಚ್ಚು ಮಂದಿ ಸ್ತ್ರೀಯರುಗಳನ್ನು ಪಡೆಯುವವರು ಮತ್ತು ಸ್ತ್ರೀಯರ, ವಿಧವೆಯರ ಆಸ್ತಿ, ಐಶ್ವರ್ಯಗಳನ್ನು ಅನಾಯಾಸವಾಗಿ ಪಡೆಯುವರು.

E, F, G ಗೋಪುರರೇಖೆಯು — ಇದನ್ನು ವ್ಯಕ್ತಿಯು ಪಡೆದಿದ್ದರೆ ಗ್ರಾಮಾಧಿಕಾರಿ ಆಗುವನು. F ಬಟ್ಟಲಾಕಾರವು, ವ್ಯಕ್ತಿಯು ಅನೇಕ ಬಡಬಗ್ಗರಿಗೆ ಮಾಡುವ ಸತ್ಪಾತ್ರ ಉಪಕಾರ, ಸಮಾಜಸೇವೆ, ದೇವಾಲಯ ವೃದ್ಧಿ ಇದನ್ನು ತಿಳಿಸುವುದು. G ಕೆಳಭಾಗದಲ್ಲಿ ತ್ರಿಕೋಣವು–ವ್ಯಕ್ತಿಯು ಹೊಂದಿದ್ದ ಲಕ್ಷಾಂತರ ರೂಪಾಯಿಗಳ ಬೆಲೆಬಾಳುವ ತೋಟ ಮುಂತಾದುವನ್ನು ವಿವರಿಸುವುದು. ಗೋಪುರ H, A ಭೂಮಿಚಿಹ್ನೆಯ ಮೇಲೆ ಸಾಗಿರುವ ಯೋಗರೇಖೆಯು ಮತ್ತು ತ್ರಿದಳ ಗೋಧಿರೇಖೆಯು ಮಕ್ಕಳು, ಮೊಮ್ಮಕ್ಕಳೊಡಗೂಡಿ ಸಮಾಜದಲ್ಲಿ ಸರ್ವರಿಗೂ ನೆರಳು ಕೊಡುವ ವೃಕ್ಷೋಪಾದಿಯಲ್ಲಿ ನೂರುವರ್ಷ ಬಾಳಿ ಆಳಿದ ವ್ಯಕ್ತಿಯು.

ಚಿತ್ರ ೯೫ ಅಂಗುಷ್ಠದ ಶಿರಭಾಗವು ಧರಿಸಿದ ಕಿರೀಟದ ಆಕಾರವು ಇರುವುದು. ಮಧ್ಯವು (ಚಕ್ರಭಾಗ) ಅಗಲವಾಗಿಯೂ, ದುಂಡಾದ ವೃಕ್ಷಗಳಿಂದ ಕೂಡಿರುವುದಾಗಿಯೂ ಇರುವುದು. C, E ರೇಖೆಗಳ ಮಧ್ಯದಲ್ಲಿ ಮಧುರರೇಖೆಯು ಇರುವುದು. ಕೇಸರ, ತಾರಾ ರೇಖೆಗಳು ವಿಶೇಷವಾಗಿರುವುವು. ವ್ಯಕ್ತಿಯು ವಿಶಾಲಬುದ್ಧಿಯುಳ್ಳವನೂ, ಧೈರ್ಯ-ಸ್ಥೈರ್ಯವಂತನೂ, ವಿದ್ಯಾ-ವಿನಯಸಂಪನ್ನನೂ ಆಗುವನು. ಶಿರವು ಕಿರೀಟ ಹೊಂದಿರುವುದರಿಂದ ಸುಂದರವಾದ ಭಾಗ್ಯಭರಿತಳಾದ ಪತ್ನಿಯನ್ನು ಹೊಂದಿರುವನು. A, B ರೇಖೆಯು ಮೂಲದಲ್ಲಿ ಭಿನ್ನವಾಗಿರುವುದರಿಂದ ಹುಟ್ಟಿದ ಊರುಬಿಟ್ಟು ಬೇರೆ ಊರುಗಳ ಸಂಚಾರ ಅತಿಯಾಗುವುದು. A, B ಭಿನ್ನವಾಗಿದ್ದರೂ ಸಹ ಅಲ್ಪ ಸಂಬಂಧವನ್ನು ಮುಂದೆ ಇರುವ ರೇಖೆಗಳೊಡನೆ ಹೊಂದಿರುವುವು. B ಕೆಳಭಾಗದಲ್ಲಿ ಮತ್ತು B, D ರೇಖೆಗಳ ಮಧ್ಯೆ ಕೇಸರ, ತಾರಾ ರೇಖೆಗಳು ಇರುವುದರಿಂದ ಮನೆತನದವರು — ವಿಶೇಷ ಐಶ್ವರ್ಯವಂತರೂ ಆಗಿರುವರೆಂದು ತಿಳಿಯುವುದು. E, F, D ಹಿಂದೂ

ಶಾಸ್ತ್ರದಂತೆ ಅಕ್ಷಯಪಾತ್ರೆಯು ಚಿಹ್ನೆ. ಇದರಿಂದ ವ್ಯಕ್ತಿಯು ಪ್ರಶಾಂತಿಯೂ, D, F, G ತ್ರಿಕೋಣ ಚಿಹ್ನೆಯು ಇರುವುದರಿಂದ ವ್ಯಕ್ತಿಯು ರಾಜ, ಪ್ರಭು, ರಾಜಕಾರಣಪಟು, ಅನೇಕ ಯಂತ್ರ, ವ್ಯಕ್ತಿ-ಶಾಖೆಗಳ, ಭೂಮಿಯ ಒಡೆಯನು, ನೂರಾರುಮಂದಿ ಸೇವಕರು, ವಾಹನಾದಿ ಯೋಗಗಳುಳ್ಳವನೂ ಆಗಿರುತ್ತಾನೆ: ಮತ್ತು ದೇವಾಲಯ, ದೇಶಾಭಿವೃದ್ಧಿ ಮಾಡುವವನೂ ಪುತ್ರ-ಪೌತ್ರರುಗಳುಳ್ಳವನೂ, ಧನಿಕನೂ ಆಗಿ ಜೀವಿಸುವನು. ರತಿರೇಖೆಗ ಪುತ್ರರೇಖೆಯು ಸೇರಿರುವುದರಿಂದ ವ್ಯಕ್ತಿಗೆ ಪತ್ನಿಯ ಕಡೆಯಿಂದ ಮಹತ್ತರ ಸಹಾಯ, ಐಶ್ವರ್ಯ ಲಭಿಸುವುದು. (ಆದರೆ ಅಲ್ಪ ದುಷ್ಟ ಚಟಗಳು ಇರುತ್ತವೆ.)

ಚಿತ್ರ ೯೭—(೯೦X, Y ಚಿತ್ರದ ಕೆಳಭಾಗದಲ್ಲಿರುವ ಚಿತ್ರ) ಭೂಮಿ ಪದರದ ಮೇಲೆ ಇರುವ ಚಕ್ರದ ಆವರ್ತ ಎಡಭಾಗದಲ್ಲಿ ಚಂದ್ರಾಕಾರ ಕಾಣುವುದು. ಚಕ್ರದ ತಳಭಾಗದಲ್ಲಿ ಅಗಲ ಹೆಬ್ಬಾಗುತ್ತಾ ಇರುವುದರಿಂದ ಕರ್ಕಾಟಕಲಗ್ನದ ಅಂತ್ಯ ಎಂದು ಗುರುತಿಸಿರುವುದು. (ಸಂಧಿಲಗ್ನ) ಲಗ್ನದಲ್ಲಿ ಕುಜ.

ಚಕ್ರದ ಕೇಂದ್ರಭಾಗದಲ್ಲಿ ಅಡ್ಡ ಗೆರೆಗಳು ಇರುವುವು. A ಗುರುತಿನ ಕಡೆಯಿಂದ ಸಾಗಿರುವ ಗೋಧಿರೇಖೆ ಪ್ರಥಮದಲ್ಲಿ ಸ್ವಲ್ಪಭಾಗ ಶುಭವಾಗಿ-ರುವುದು. ಇದರಿಂದ ಬಾಲ್ಯದಲ್ಲಿ ೨೫. ೨೬ ನೆಯ ವಯಸ್ಸಿನ ವರೆಗೆ ಸುಖ, ಶಾಂತಿಜೀವನ. ೨೬ರ ಅಂತ್ಯದಲ್ಲಿ ವಿವಾಹ. ಹಾಗೂ ೨೭, ೨೮ ಜಗಳ; ಕದನದಿಂದ ಸಂಸಾರ. ೨೮ರ ಅಂತ್ಯ, ೨೯ ನೆಯ ವಯಸ್ಸಿನ ಸುರುವಿನಲ್ಲಿ ಪತ್ನಿಯೊಡನೆ ಮಹತ್ತರವಾದ ಶತ್ರುತ್ವ ಸುರುವಾಗಿ, ವ್ಯಕ್ತಿಗೆ ಪ್ರಥಮ ಪತ್ನಿಯಿಂದ ಜೀವನವೇ ಅಶಾಂತಿಮಯವಾಗುವುವು. ೪೩ನೆಯ ವಯಸ್ಸಿನ ವರೆಗೆ ವಿರಹವೇದನೆ, ಜೊತೆಗೆ ದ್ರವ್ಯಕ್ಕಾಗಿ ಶ್ರಮ, ಸ್ವಂತ ಸೋದ-ರಿಗೂ ಇದೇ ರೀತಿಯ ಕಷ್ಟ. A. B ರೇಖೆಯು ಭಿನ್ನಭಿನ್ನವಾಗಿರುವುದ ರಿಂದ ಸಂಪಾದಿಸುವ ಹಣ-ಊಟ, ಬಟ್ಟೆಗೆ ಸಾಕು.

B ರೇಖೆಯು ಕೆಳಗಿರುವ (C ಡೊಂಕ ಭಿನ್ನವಾದ) ಮಧುರ ರೇಖೆಯು ವ್ಯಕ್ತಿಗೆ ಇರುವ ಅಲ್ಪವಿದ್ಯೆ, ಚಂಚಲಪ್ರವೃತ್ತಿಯನ್ನು ತಿಳಿ ಸುವುದು.

D ರತಿರೇಖೆಯೂ ಜಚ್ಚಿದ ಕಟ್ಟಿಗೆಯಂತೆ ಸೀಳುಸೀಳಾಗಿರುವುದು. ಇದರಿಂದ ವ್ಯಕ್ತಿಗೆ ಪತ್ನಿಯ ಸುಖ ಕನಿಷ್ಠವಾಗಿರುವುದು. ಇಂತಹ ರತಿರೇಖೆಯಿದ್ದ ವ್ಯಕ್ತಿಗಳು ಪತ್ನಿಯಿಂದ ದ್ರವ್ಯ, ವಾಹನಹಾನಿಗಳನ್ನು ಅನುಭವಿಸಬೇಕು.

ಚಿತ್ರ ೧೧೧—ಈ ಅಂಗುಷ್ಠದಲ್ಲಿ ರೇಖೆಗಳೆಲ್ಲಾ (Drooping and Dented lines) ವಕ್ರಾಕಾರಗಳಾಗಿಯೂ, ಭಿನ್ನಭಿನ್ನವಾಗಿಯೂ, ಡೊಂಕಾಗಿಯೂ ಇರುವವು. ಸುರುಳಿಯ ಕೇಂದ್ರದಲ್ಲಿ ಒಂದು ರೇಖೆಯೂ ಮತ್ತೊಂದು ರೇಖೆಯನ್ನು ಕಚ್ಚಿ (ಕಟ್ಟಿ)ರುವುದು. ಪತಿವಿಯೋಗದ ಸೂಚನೆ. A ರೇಖೆಯು ಸ್ವಲ್ಪ ದೂರ ಶುಭವಾಗಿದ್ದೂ B ಕಡೆಗೆ ಸಾಗುತ್ತಿದ್ದಂತೆ ಸೀಳುಗಳಾಗಿಯೂ ಇರುವುದು. ೪ ಮತ್ತು ೩ ಮಧ್ಯದ ಮಾರ್ದರ ರೇಖೆಗಳು ಇರುವುದರಿಂದ ಈಕೆಯು ಅಲ್ಪವಿದ್ಯಾವತಿಯೂ, ಬಂಧು-ಬಳಗವುಳ್ಳವಳೂ ಆಗಿರುವಳು. (ರತಿ) ಪತಿರೇಖೆಯು ೫ ಸುರುವಿನಲ್ಲಿ ಸ್ವಲ್ಪ ದೂರದ ವರೆಗೆ ಶುಭವಿರುವುದರಿಂದ, ವಿವಾಹದ ನಂತರ ಕೆಲವು ವರ್ಷಗಳ ವರೆಗೆ ಸಂಸಾರಸುಖವು ಇದ್ದು, ನಂತರ ಪತಿಯು ಆಕಸ್ಮಿಕ ಮರಣ ಹೊಂದುವನು.

ಒಂದು ಮತ್ತು ಎರಡು (೧ a d ೨) ರೇಖೆಗಳು ಸುಳಿಯಲ್ಲಿ ಸೇರಿರುವುವಾದರೂ ಸುಳಿಯ ಆವರ್ತಗಳು ಅಲ್ಪ ಶುಭವಿರುವುವು. ಇದರಿಂದ ಈಕೆಗೆ ಹೆಣ್ಣು ಸಂತತಿಗಳಾದ ನಂತರ ಪತಿವಿಯೋಗವಾಗುವುದು. ೬ ಅಂತ್ಯದಲ್ಲಿ ಟಿಸಿಲೊಡೆದಿರುವ ರೇಖೆಯು ಜೀವನದ ದ್ವಿತೀಯಾರ್ಧದಲ್ಲಿ ವೈಧವ್ಯವನ್ನು ಸೂಚಿಸುವುದು. ಅಲ್ಪಸ್ವಲ್ಪ ಕೇಸರರೇಖೆಗಳು ಇರುವುದರಿಂದ ಈಕೆಗೆ ಪತಿ ಮತ್ತು ಪಿತೃವಿನ ಕಡೆಯಿಂದ ಭೂಮಿ, ದ್ರವ್ಯ ಸಹಾಯವು ಲಭಿಸುವುದು.

ಚಿತ್ರ ೧೧೨—ಮೇಲೆ ಹೇಳಿದವರ ಎಡ ಅಂಗುಷ್ಠ—ಈ ಚಿತ್ರದಲ್ಲಿ ೩ ಮೇಲಿಂದ ಹೊರಟ ರೇಖೆಯು ಅತ್ತಗೆರೆಗಳನ್ನು ಛೇದಿಸಿರುವುದು. ೪ ಅಂಗುಷ್ಠದ ಹೊರಭಾಗದಿಂದ ಹೊರಟ ರೇಖೆಯು ಕೇಂದ್ರದಲ್ಲಿ ಬಾಯಿ ಬಿಟ್ಟಂತೆ ಕಾಣುವುದು. ಇದು ಅಶುಭಸೂಚಕ.

ಚಿತ್ರ ೧೦೨—ಈ ಚಿತ್ರದಲ್ಲಿ A, B ರೇಖೆಯನ್ನು C, D ರೇಖೆಯು ಕೇಂದ್ರದಲ್ಲಿ ಭೇದಿಸಿದೆ. ಈ ರೀತಿಯ ದೊಡ್ಡ ಉದ್ದ ಗೆರೆಗಳಿಂದ ಉಂಟಾದ ಗುಣಕ ಚಿಹ್ನೆವುಳ್ಳವರು ವಿವಾಹವಾದ ಕೆಲವೇ ಕಾಲಗಳಲ್ಲಿ ಸತಿ-ಪತಿಯರು ದೂರವಾಗುವರು. ಈಕೆಯು, ವಿವಾಹವಾದ ಮರುವರ್ಷದಲ್ಲಿಯೇ ಪತಿಯು ದೇಶಾಂತರ ಓಡಿಹೋಗಿ ಮತ್ತೊಂದು ವಿವಾಹವಾಗುವನು. ಈಕೆಯು, ಪತಿಯು ದೂರವಾದ ಬಳಿಕ E ಗುರುತಿನ ಬಳಿ ಮತ್ತು D ಗುರುತಿನ ಮೇಲ್ಭಾಗದಲ್ಲಿ ಅತಿ ಸಣ್ಣ ಗುಣಕಚಿಹ್ನೆಗಳು ಇರುವುದರಿಂದ, ಕಾಮಾರ್ಥವಾಗಿ ಮಿತ್ರರನ್ನು ಪಡೆದು ಅವರುಗಳಿಂದಲೂ ವಂಚಿತಳಾಗುವಳು. F, G ರೇಖೆಯು ಮತ್ತು ಮಧುರರೇಖೆಯು ಅಲ್ಪಸ್ವಲ್ಪ ಶುಭವಿರುವುದರಿಂದ, ಈಕೆಯು ವಿದ್ಯಾವತಿಯು ಮತ್ತು ಜೀವನೋಪಾಯಕ್ಕಾಗಿ ಸಾಮಾನ್ಯ ವೃತ್ತಿಯುಳ್ಳವಳು ಆಗಿರುತ್ತಾಳೆ.

ಚಿತ್ರ ೧೧೪—ಈ ಚಿತ್ರವು ಬಾಲವಿಧವೆಯದಾಗಿರುವುದು. O ಮತ್ತು O ರೇಖೆಯು ಮುಂಭಾಗದಲ್ಲಿ ಮೊಂಡಾಗಿ ಸಾಗಿದೆ. (O and line occuring the place of earth) ಈ ರೇಖೆಯು ಮೇಲೆ ಒಂದು ಮೊಟಕು ರೇಖೆಯು ನಿಂತಿರುವುದು. ಇದರಿಂದ ಈಕೆಯು ಹಟ, ಛಲವುಳ್ಳವಳೂ, ಧನಸಂಚಯ ಮಾಡುವವಳೂ ಆಗಿರುವಳು. (ಇಲ್ಲಿ ಹೇಳಿರುವಂತೆ ಹಟ, ಛಲ, ಧನಸಂಚಯ ಮತ್ತು ಪತ್ನಿಯನ್ನು ವಂಚಿಸಿ ಪ್ರಾಣತೆಗೆದ ವ್ಯಕ್ತಿಯ ಅಂಗುಷ್ಠ. ಚಿತ್ರ ೮೩ರಲ್ಲಿ B, C ರೇಖೆಯ ಮೇಲೆ ಮೂರು ಮೊಟಕು ರೇಖೆಗಳನ್ನು X ಮೂಲಕ ತೋರಿಸಿದೆ.)

೧೧೪—ಈ ಚಿತ್ರದಲ್ಲಿ ಒಂದೇ ಮೊಟಕುರೇಖೆ O ಮತ್ತು O ರೇಖೆಯ ಮೇಲೆ ಇರುವುದರಿಂದ ದುಷ್ಟಗುಣವನ್ನು ಅಲ್ಪವಾಗಿ ವಿವರಿಸಿದೆ.

A ರೇಖೆಯು ಸ್ವಲ್ಪ ದೂರ ಸಾಗಿದ ನಂತರವೆ ಭಿನ್ನವಾದ ರೇಖೆಯು. ಈ ರೇಖೆಯಿಂದ ೨ ಅಂಗುಷ್ಠದ ಹಿಂಭಾಗಕ್ಕೆ ಸಾಗಿರುವುದು. A ರೇಖೆಯು ಮಧ್ಯದಲ್ಲಿ (ಭಿನ್ನಭಿನ್ನ) (Dented) ಹರುಕುಮುರುಕಾಗಿ B ಸಮೀಪಕ್ಕೆ ಸಾಗಿದಂತೆ ಅಲ್ಪ ಶುಭವಾಗಿರುವುದು. ಈಕೆಯು ಬಾಲ್ಯದಿಂದ ೨೮, ೨೯ನೆಯ ವಯಸ್ಸಿನ ವರೆಗೆ ಅಲ್ಪ ಸುಖವನ್ನೂ, ನಂತರ ಪತಿವಿಯೋಗ, ಅವಮಾನ

ಗಳನ್ನೂ ಅನುಭವಿಸುವಳು. ಳಳನೆಯ ವಯಸ್ಸಿನಿಂದ ಅಲ್ಪಸ್ವಲ್ಪ ಶುಭ-ವಿರುವುದು.

೪ ಮಂಕಾಗಿರುವ ಮಧುರರೇಖೆಗೆ ಕೇಸರರೇಖೆಗಳು ಸೇರಿರುವುದರಿಂದ ಅಲ್ಪವಿದ್ಯೆಯಿಂದ ಉದರಪೋಷಣೆಗೆ ವೃತ್ತಿಶೀಲಳಾಗುವಳು.

ಪತಿರೇಖೆಯೂ (೩) ಭಂಗವಾಗಿರುವುದು. ಮತ್ತು ೫ ಪಠಾಲಿಕಾ ರೇಖೆಯೂ ಭಿನ್ನಭಿನ್ನವಾಗಿರುವುದು. ಆದರೂ ಕೇಸರರೇಖೆಗಳು ಕಾಣು ವುದರಿಂದ ಅಲ್ಪಸ್ವಲ್ಪ ದ್ರವ್ಯವಿರುವುದು.

ಚಿತ್ರ ೧೧೫ರಲ್ಲಿ C ಕಡೆಯಿಂದ ಹೊರಟ ರೇಖೆಯೂ—B ರೇಖೆಯೂ ಒರಟಾಗಿ D ಬಳಿಯಲ್ಲಿ ಭಿನ್ನವಾಗಿರುವುದು. ಮತ್ತು ಕೇಸರರೇಖೆಗಳೆಲ್ಲಾ ಅಸ್ಪಷ್ಟವಾಗಿರುವುವು. ಅಂಗುಷ್ಠವು ಅತಿ ಚಿಕ್ಕದಾಗಿಯೂ, ಕಟುವಾಗಿಯೂ ರೇಖೆಗಳೆಲ್ಲಾ ಕಪ್ಪಾಗಿಯೂ ಇರುವುದು. ಇದರಿಂದ ಸಂಸಾರದಲ್ಲಿ ಸುಖ ವಿಲ್ಲ. ವಾಯುರೋಗದ ಪ್ರಾಬಲ್ಯದಿಂದ ದೇಹವು ದಪ್ಪ. D ಯಿಂದ E ವರೆಗೆ ಅಸ್ಪಷ್ಟ ರೇಖೆ—ಹೊಟ್ಟೆಯಲ್ಲಿ ದುರ್ಮಾಂಸದ ಬೆಳವಣಿಗೆ; ೨೮ ವರ್ಷ-ವಾದರೂ ಈಕೆಯು ಪುಷ್ಪವತಿಯಾಗುವುದಿಲ್ಲ.

H ಶಿರದ ಮೇಲೆ ಇರುವ ಪತಿರೇಖೆಯೂ ಸೀಳುಸೀಳಾಗಿರುವುದು. ಪತಿಯೊಡಗೂಡಿದ್ದರೂ ಸಹ ಈಕೆಗೆ ಮನ್ಮಥಸುಖವು ತಿಳಿಯದಾಗಿರುವುದು. ಸಂತತಿಗಳೂ ಇಲ್ಲ.

ಚಿತ್ರ ೧೧೬—C ಮತ್ತು D ರೇಖೆಗಳು ಕೇಂದ್ರವನ್ನು ಭಂಗ ಗೊಳಿಸಿರುವುದು. A ಮಂಕಾಗಿಯೂ, F ಕಡೆಯಿಂದ ಸಾಗಿರುವುದರಿಂದಲೂ ಮತ್ತು A ಯಿಂದ B ವರೆಗೆ ಇರುವ ಮಂಕಾದ ಗೋಧಿರೇಖೆ F ಸೀಳು-ಗಳಾಗಿರುವ ಮಧುರರೇಖೆ-ಇದರಿಂದ ಸಂಸಾರದಲ್ಲಿ ನಿಸ್ಸಾರ, ಕಫ, ವಾತ-ರೋಗ. ಈಕೆಯನ್ನು ಪೋಷಿಸುವುದೇ ಪತಿಯ ದಿನಚರಿ. (ಈಕೆಯು ೮೩ ನೆಯ ಚಿತ್ರದವರ ದ್ವಿತೀಯ ಪತ್ನಿ; ರೋಗದಿಂದ ನರಳುತ್ತಿರುವಳು).

### ಸಂತತಿಭಾವ

ಚಿತ್ರ ೧೧೯— ಸ್ತ್ರೀಯ ಬಲಹೆಬ್ಬೆರಳ ಮುದ್ರೆ, ಗೋಧಿರೇಖೆ (೨ ರಿಂದ ೧) ಉದ್ದವಾಗಿರುವುದು. ಈ ರೇಖೆಯ ಮಧ್ಯಭಾಗದಲ್ಲಿ (ಇದೇ ಚಿತ್ರದಲ್ಲಿ ೧ನೆಯ ಗುರುತಿನ ಮೇಲೆ ತೋರಿಸಿರುವಂತೆ V ಗುರುತು ).

ಕವಡು ಕಡ್ಡಿಯಂತಹ ನಾಗ–ನಾಲಿಗೆ ಎಂಬ ರೇಖೆಯೂ ಇರುವುದು. ಈ ರೇಖೆಯುಳ್ಳವರಿಗೆ ಸಂತತಿಗಳಾಗುವುದೇ ಕಷ್ಟ ಹಾಗೂ ಹೆಣ್ಣುಮಕ್ಕಳು ಗಳು ಹೆಚ್ಚಾಗಿ ಹುಟ್ಟುವರು. ವಂಶವೃದ್ಧಿಗೆ ಪುತ್ರಭಾಗ್ಯವು ಉಂಟಾಗು ವುದಿಲ್ಲ.

ಈಕೆಗೆ ೭ ಸಂತತಿಗಳಾಗುವುವು. ಅವರಲ್ಲಿ ೬ ಹೆಣ್ಣು, ೧ ಮಾತ್ರ ಗಂಡು. ಹೆಣ್ಣು ಸಂತತಿಗಳು, ಪ್ರಾಯ, ಬಾಲ್ಯ, ವಯಸ್ಸುಗಳಲ್ಲಿ ೫ ಜನ ಪುತ್ರಿಯರು ಅಕಾಲಮೃತ್ಯುವಿಗೆ ತುತ್ತಾಗುವರು. ಕೊನೆಗೆ ಉಳಿದಿದ್ದ ೧ ಗಂಡು. ೧ ಹೆಣ್ಣು ಇವರಲ್ಲಿ ಮಧ್ಯವಯಸ್ಸಿನ ಒಬ್ಬ ಮಗನು ಶತ್ರುಗಳ ಮೋಸಕ್ಕೆ ಒಳಗಾಗಿ ಪ್ರಾಣನೀಗುವನು. (ಆತನಿಗೆ ೧ ಗಂಡು, ೨ ಹೆಣ್ಣು ಸಂತಾನ. ಕೊನೆಗೆ ಗಂಡುಮಗುವು ಪ್ರಾಣಬಿಟ್ಟಿತು). ಉಳಿದ ಹೆಣ್ಣು ಮಾತ್ರ ಮಧ್ಯಮ ಸುಖಿಯಾಗಿರುವಳು.

ಇನ್ನು ಈಕೆಗೆ ಪುತ್ರವಿಯೋಗದ ನಂತರ ಉಳಿದಿದ್ದ ಒಬ್ಬ ಮಗಳೂ ತೊನ್ನು, ಕುಷ್ಠರೋಗದಿಂದ ಕಷ್ಟಪಡುತ್ತಿರುವಳು. ೩ ಮತ್ತು ೬ ಮಾಧುರ ಮಂದಾರ ರೇಖೆಗಳು ಭಿನ್ನಭಿನ್ನವಾಗಿರುವುವು. ಈಕೆಯೂ ಬುದ್ಧಿವಂತಳು ಮತ್ತು ಪರೋಪಕಾರಿ, ಮಾತಿನಲ್ಲಿ ನಿಪುಣಳು ಇರುವಳು.

ಚಕ್ರದ ಕೇಂದ್ರಕ್ಕೆ ಸ್ವಲ್ಪ ಕೆಳಗೆ ಸಣ್ಣ ವೃತ್ತರೇಖೆ ಇರುವುದು. ಇದರಿಂದ ಲಕ್ಷ್ಮಿದೆಸೆಯಿಂದ ಮನೆಯಲ್ಲಿ ಗುರುಗ್ರಹವಿರುವುದು. ಸಮಾಜ ದಲ್ಲಿ ಅಲ್ಪಸ್ಥಾನ, ಕೀರ್ತಿ ಇರುವುದು. ಮೇಲಿನ ಗುಣಗಳು ಇರುವುವು.

ಸುರುವಿನಿಂದ ಅಲ್ಪ ಶುಭವಾಗಿದ್ದ ಗೋಧಿರೇಖೆಯ (೧ನೆಯಸಂಖ್ಯೆಯ ಕಡೆ) ಮಧ್ಯಭಾಗ ಕಳೆದ ನಂತರ, ಅಸ್ಪಷ್ಟವಾದ ಬೀಳುರೇಖೆ ( V ರೇಖೆಯ ಪಕ್ಕದಲ್ಲಿ) ಯಿಂದ ಕತ್ತರಿಸಲ್ಪಟ್ಟಿದೆ. ಹೀಗೆ ಕತ್ತರಿಸಿದ ಒಂದು ತುದಿಯೂ ೩ ಮಧುರರೇಖೆಯನ್ನು ಭಾಗಗೊಳಿಸಿದೆ. ಮತ್ತೊಂದು ತುದಿಯು ಇದೇ ಗೋಧಿರೇಖೆಯ ಮೇಲೆ ಸರ್ಪದ ಮರಿ ಬಾಯಿಬಿಟ್ಟು ಇರುವಂತ ಅಂಗುಷ್ಠದ ಪಾರ್ಶ್ವವನ್ನು ನೋಡುತ್ತಿರುವುದು. ಇದರಿಂದ ಪತಿಗೆ ಮುಪ್ಪಿನಲ್ಲಿ ದೃಷ್ಟಿ ನಾಶವಾಗುವದು. ಮತ್ತು ಈಕೆಯ ವಯಸ್ಸು ೫೩ ರಿಂದ ೫೭ರೊಳಗೆ ಪತಿಯು ಗತಿಸುವನು. ಪತಿಭಾಗ್ಯವನ್ನು ಹೇಳುವ ೭ ರೇಖೆಯೂ ಭಿನ್ನ ಭಿನ್ನವಾಗಿರುವುದು. ಮಾಲಿಕಾರೇಖೆ ೪ರ ಪ್ರಥಮ ಭಾಗದಿಂದ ಹೊರಟ

ರೇಖೆಯು ಒನೆಯ ರೇಖೆಯನ್ನು ಅಂತ್ಯದಲ್ಲಿ ಭಿನ್ನಗೊಳಿಸಿದೆ. ಮತ್ತು ಪತಿರೇಖೆಯು ಭಾಗವೆಲ್ಲಾ ಕೇಸರರೇಖೆಯಿಂದ ಕೂಡಿರುವುದು. ಈಕೆಗೆ ಪರವ್ಯಕ್ತಿಗಳ ಬಗ್ಗೆ ವಿಶೇಷ ವಿಶ್ವಾಸ, ಪರರಿಂದಲೇ ವಿಶೇಷವಾಗಿ ಸಹಾಯ ಲಭಿಸುವುದು. ಕೇಸರರೇಖೆಗಳು ಇರುವುದರಿಂದ ಭೂಮಿ, ದ್ರವ್ಯವುಳ್ಳವ-ರಾಗಿರುತ್ತಾರೆ.

ಚಿತ್ರ ೧೨೪ ಈ ಅಂಗುಷ್ಠದಲ್ಲಿ F ದಿಂದ ಅಂಗುಷ್ಠದ ಮಧ್ಯದ ವರೆಗೆ ಈ ರೇಖೆ ಕಚ್ಚುಕಚ್ಚಾಗಿ (Dented) ಕಾಣುವುದು. ಮತ್ತು I, J ಪಾಲೀಕಾರೇಖೆಯು ಪ್ರಥಮ ಭಾಗವೆಲ್ಲಾ ಕತ್ತರಿ ಗುರುತು ಹೊಂದಿರುವುದು ಮತ್ತು ಈ ರೇಖೆಗಳು ಅತಿ ದಪ್ಪವಾಗಿರುವವು. ಇದರಿಂದ ವ್ಯಕ್ತಿಯು ಬಾಲ್ಯದಿಂದಲೂ ಶ್ರಮಪಟ್ಟಿರುವನು. ಹಾಗೂ F ರೇಖೆಯು ದ್ವಿತೀಯಾರ್ಧ ದಿಂದ ಮಾತ್ರ ಉಪರೇಖೆಯು ಸಹಾಯ ಪಡೆದಿರುವುದು. ಇದರಿಂದ ವ್ಯಕ್ತಿಗೆ ೪೨ನೆಯ ವಯಸ್ಸಿನಿಂದ ಅಲ್ಪ ಶುಭ. ೪೪ರಲ್ಲಿ ಮಾತ್ರ ಒಂದು ಹೆಣ್ಣುಮಗು. ವಿನ ಜನನವಾಗುವುದು. ಅಂದಿನಿಂದ ದಿನದಿನಕ್ಕೂ ಸುಖ-ಶಾಂತಿ ಇರುವುದು.

F, E ರೇಖೆಯ ಮೇಲೆ ಟಿಸಿಲೊಡೆದ ರೇಖೆಯು ಇರುವುದು. L ರೇಖೆಯು ಶಂಖದ ಸುತ್ತ ಕೇಂದ್ರವನ್ನು ಭೇದಿಸಿರುವುದು. ಸಂತತಿಭಾಗ್ಯ ವನ್ನು ನಿಧಾನವಾಗಿ ತಿಳಿಸುವುದು. ಜೊತೆಗೆ A, B, C ರೇಖೆಯು ಪೂರ್ಣ ಸರ್ಪದಾಕೃತಿಯನ್ನು ಹೊಂದಿರುವುದು. ಇದರಿಂದ ರಾಹುಗ್ರಹವು ಮಿಥುನ-ದಲ್ಲಿರುವುದೆಂದೂ, ಬಂಧು-ಬಳಗಗಳಿಂದ ನಿಷ್ಠುರವೂ, ಈ ವ್ಯಕ್ತಿಯ ವಂಶದಲ್ಲಿ ಸಂತತಿಭಾಗ್ಯ ಕಡಿಮೆ ಎಂದೂ ತಿಳಿಸುವುದು. D ಕಡೆಯಿಂದ ಭಿನ್ನವಾದ ಮತ್ತು ದ್ವೀಪಾಕೃತಿ ಹೊಂದಿದ ರೇಖೆಯು ಗೋಧಿರೇಖೆಯನ್ನು ಭೇದಿಸಿರುವುದು. ಇದರಿಂದ ವ್ಯಕ್ತಿಗೆ ಒಂದೇ ಸ್ತ್ರೀಸಂತಾನವೆಂದೂ ಪತ್ನಿಗೆ ಮತ್ತು ಈ ವ್ಯಕ್ತಿಗೆ ಕಫ, ವಾತರೋಗವೆಂದೂ ತಿಳಿಸುವುದು. G ಮಧುರ ರೇಖೆಯು ಮಂಕಾಗಿರುವುದರಿಂದ ಈ ವ್ಯಕ್ತಿಯು ಅಲ್ಪವಿದ್ಯಾವಂತನು.

ಚಿತ್ರ ೧೨೫ — ಹಿಂದೆ ಹೇಳಿರುವ ರೇಖೆಯ ವಿವರಣೆಗಿಂತ ಕನಿಷ್ಠ ಫಲವು ಈ ವ್ಯಕ್ತಿಗೆ ಇರುವುದು. E, F ರೇಖೆಯು ಮಾಸಲಾಗಿ, ಭಿನ್ನ ವಾಗಿರುವುದು. ಈ ರೇಖೆಯ ಮೇಲೆ V ಆಕಾರದ ಭಿನ್ನರೇಖೆಗಳು (ನಾಗನಾಲಿಗೆ) ಶಂಖದ ಆಕಾರವನ್ನು ಮೇಲೆ ಕೆಳಗೆ C ಮತ್ತು D

ರೇಖೆಯು ಭಂಗಗೊಳಿಸುವುದು. G ರತಿರೇಖೆಯು ಸೀಳುಗಳಾಗಿಯೂ, ( Forked ) ಸತ್ವಯುತವಾಗಿಯೂ ಇರುವುದು. ಇದರಿಂದ ಪತ್ನಿಗೆ ಗರ್ಭಾಶಯರೋಗವು, A ಯಿಂದ B ವರೆಗೆ ಶತ್ರುರೇಖೆಯು ಗೋಧಿರೇಖೆಯನ್ನು ಭಂಗಗೊಳಿಸಿ ಸಾಗಿರುವುದರಿಂದ ವ್ಯಕ್ತಿಗೆ ನಿಶ್ಶಕ್ತಿ ಸತ್ವರಹಿತವಾದ ವೀರ್ಯವು ಇರುವುದು. ಇದರಿಂದ ವಂಶವೃದ್ಧಿ ಇಲ್ಲದವನೂ ಕಷ್ಟಜೀವಿಯೂ ಆಗಿರುತ್ತಾನೆ.

ಉಪಗೋಧಿರೇಖೆಯಾದ F ರೇಖೆಯು ಮಧ್ಯದಲ್ಲಿ ಬಾಯಿಬಿಟ್ಟಿರುವುದು. ಇದರಿಂದಲೂ ವ್ಯಕ್ತಿಯು ಮೇಲೆ ಹೇಳಿದಂತೆ ಸಂತಾನರಹಿತನೂ, ಕಷ್ಟಜೀವಿಯೂ, ರೋಗಿಷ್ಠನೂ ಆಗಿರುತ್ತಾನೆ. F, G ಮಧ್ಯದಲ್ಲಿ ರತಿರೇಖೆಯ ಮೇಲಿರುವ ಕತ್ತರಿಗುರುತು, ವ್ಯಕ್ತಿಯು ಬಾಲ್ಯದಲ್ಲಿ ರತಿಯರ ಸ್ನೇಹದಿಂದ ಶಕ್ತಿಗುಂದಿದ ವಿಷಯನಿರೂಪಣೆಯ ಸಂಕೇತ.

ಚಿತ್ರ ೧೨೩— A, B ರೇಖೆಯು ಭಿನ್ನಭಿನ್ನವಾಗಿರುವುದು. ಈ ಗೆರೆಯ ಮೇಲೆ V ಚಿಹ್ನೆ ಇರುವುದು. A ಗುರುತಿನ ಮೇಲೆ ಬಾಣದ ಗುರುತಿನ ಬಳಿ (Near arrow sign) ಅಲ್ಪ ಉದ್ದ ದಪ್ಪವಾದ ಗುರುತು ಇರುವುದು. ( ಇದೇ ರೀತಿಯ ಗುರುತು ೧೨೪ ನೆಯ ಚಿತ್ರದ ೭ನೆಯ ಸಂಖ್ಯೆಯ ಬಳಿಯೂ ಇರುವುದು). ಇದರಿಂದ ವ್ಯಕ್ತಿಗೆ ಒಂದೇ ಹೆಣ್ಣು ಸಂತತಿ ಇರುವುದು ಎಂದು ತಿಳಿಯುವುದು.

D ಯಿಂದ A ವರೆಗೆ ಸಾಗಿರುವ ರಿಪುರೇಖೆಯು ವ್ಯಕ್ತಿಯಲ್ಲಿ ಶಕ್ತಿಯುತವಾದ ಪುರುಷಜೀವಾಣುಗಳಿಲ್ಲವೆಂಬುದನ್ನು ತಿಳಿಸುವುದು.

ಜೊತೆಗೆ E ರತಿರೇಖೆಯು ಅತಿ ಉದ್ದವಾಗಿಯೂ, ಸುರುಳಿನಲ್ಲಿ ಭಿನ್ನವಾಗಿಯೂ ಇರುವುದರಿಂದ ಸಂತಾನಫಲ ವಿರಳವೆಂದು ತಿಳಿಸುವುದು. B, A ರೇಖೆಯಿಂದ ಮಾಲಿಕಾರೇಖೆಯ ವರೆಗೆ ಉದ್ದವಾದ ಮತ್ತು ಚೌಕಾಕೃತಿಗಳುಳ್ಳ ತಾರಾ, ಕೇಸರರೇಖೆಗಳು ಹೆಚ್ಚಾಗಿರುವುದರಿಂದ ಈ ವ್ಯಕ್ತಿಯು ಭೂಮಿ, ಗೃಹ, ದ್ರವ್ಯ, ವಾಹನಾದಿಗಳನ್ನು ವಿಶೇಷವಾಗಿ ಹೊಂದಿದ್ದಾನೆ. ಆದರೆ B ಬಳಿಯಲ್ಲಿ ಗೋಧಿರೇಖೆಯು (ಇಬ್ಭಾಗ) ಟಿಸಿಲೊಡೆದಿರುವುದರಿಂದ ಈ ವ್ಯಕ್ತಿಯು ನಂತರ, ಸರ್ವಭಾಗ್ಯವು ಪರರ ಅಧೀನವಾಗುವುದು.

ಅಂಗುಷ್ಠದ ಶಿರಭಾಗ (ಚಕ್ರಭಾಗ) ದಲ್ಲಿ ಬಿಳಿಯ ಛಾಯೆಯೂ ಅತಿ ಯಾಗಿರುವುದರಿಂದ ಮತ್ತು ಸುಳಿಭಾಗವು ಭಿನ್ನವಾಗಿರುವುದರಿಂದ ವಂಶ ವೃದ್ಧಿ ಇಲ್ಲ.

ಚಿತ್ರ ೩೬—ಈ ಚಿತ್ರದಲ್ಲಿ E ಯಿಂದ F ವರೆಗೆ ಯವ ಆಕಾರ (Lens) ವಿರುವುದು. ಮತ್ತು ಅಂಗುಷ್ಠದ ಮೇಲೆ ಉದ್ದವಾದ ಕೇಸರ ರೇಖೆಗಳು ಇರುವುವು. D ರತಿರೇಖೆಯು ಬಹು ದೂರದ ವರೆಗೆ ಸೊಗ- ಸಾಗಿರುವುದು. ಅಂತ್ಯದಲ್ಲಿ ಕೇಸರರೇಖೆಗಳನ್ನು ಒಳಗೊಂಡ (C) ಸಣ್ಣ ಯವರೇಖೆ ಇರುವುದರಿಂದ ಸುಖಭಾಗ್ಯಜೀವನ. (೩೫ನೆಯ ಚಿತ್ರದಂತೆ ಯೋಗಗಳು ಇರುವುವು).

[ವಿ. ಸೂ :— ಈ ವರೆಗೆ (ಗ್ರಂಥದಲ್ಲಿ) ವಿವರಿಸಿರುವ ಸಂತಾನವಿಭಾ ಗದ ಅಂಗುಷ್ಠಗಳ ವ್ಯಕ್ತಿಗಳಿಗೆ ೬೦, ೬೫ ವರ್ಷಗಳಾಗಿರುವುವು. ಮತ್ತು ಆ ವ್ಯಕ್ತಿಗಳ ಪತ್ನಿಯರುಗಳು ಪ್ರತಿ ತಿಂಗಳು ರಜಸ್ವಲೆಯರಾಗುವ ಕಾಲ ನಿಂತು ೫, ೧೦ ವರ್ಷಗಳ ಮೇಲಾಗಿದೆ].

ಚಿತ್ರ ೩೭—ಈ ಚಿತ್ರದಲ್ಲಿ E. F ಮಾಲಿಕೆಯು (ಓವಲ್) ಪುಷ್ಪ ದಳದಂತೆ ಶುಕ್ರಸ್ಥಾನದಲ್ಲಿ ಅತಿಯಾದ ಸಹಾಯಕ ರೇಖೆಗಳು ಇರು ವುವು. ಇದರಿಂದ ಈಕೆಯು ಭಾಗ್ಯವಂತರ ಮನೆಯಲ್ಲಿ ಹುಟ್ಟಿದವಳು. D, C ಪತಿರೇಖೆಯು (ಪುರುಷರಿಗೆ ರತಿರೇಖೆ) C ಕಡೆಗೆ ಸಾಗಿದಂತೆ ಗೋಧಿ- ಯಂತೆ ( ಯವಾಕಾರವಾಗಿ ) ಇರುವುದರಿಂದ ಭಾಗ್ಯ-ಗುಣವಂತರೂ, ವಿದ್ಯಾಸಂಪನ್ನರೂ ಆದ ಪತಿಯನ್ನು ಹೊಂದಿರುವವರೂ, C. D ರೇಖೆಯು ಮೇಲೆ ಇರುವ ಮಧುರ, ಮಂದಾರ, ಮನರೇಖೆಗಳು ಮತ್ತು ಉಪರೇಖೆ ಗಳು ವಿಶೇಷ ಯೋಗದಾಯಕವಾಗಿರುವುವು. (ಸೊಗಸಾಗಿರುವುದು) ಇದರಿಂದ ಈಕೆಯು ಸೋದರ-ಸೋದರಿಯರುಳ್ಳವಳೂ ವಿಶೇಷ ಸಂತತಿ, ವಾಹನಾದಿ ಸಕಲ ಐಶ್ವರ್ಯವುಳ್ಳವಳೂ ಆಗಿದ್ದಾಳೆ.

L. T ೧೦೩ನೆಯ ಚಿತ್ರದಲ್ಲಿ A ರೇಖೆಯು ಶಂಖದ ಸುಳಿಕೇಂದ್ರಕ್ಕೆ ಸಾಗಿರುವುದು. ಕೇಂದ್ರದಲ್ಲಿ ಈ ರೇಖೆಯು ಅಂತ್ಯದಲ್ಲಿ ಒಂದು ದುಂಡಾದ ಬಿಂದುವು, ಬಿಂದುವಿನ ಕೆಳಗೆ ಒಂದು ಅಡ್ಡಗೆರೆಯೂ ಪುನಃ ಬಿಂದುವಿನ

ಮೇಲೆ (A ಗೆರೆಯ ಮೇಲೆ) ಎರಡು ಸಣ್ಣ ಸಣ್ಣ ರೇಖೆಗಳೂ ನಿಂತಿರು ವುವು. ಇದರಿಂದ ಸಂಸಾರಸುಖಕ್ಕೆ ಭಂಗ. ಪತಿಯು ದುರಾಚಾರಿಯೂ, ಮತ್ತು ಈಕೆಯನ್ನು ಬಿಟ್ಟು ಯಾವುದೋ ದೂರ ದೇಶಕ್ಕೆ ಸೇರಿ, ಪರ ಸ್ತ್ರೀಯೊಡನೆ ಸುಖಪಡುವವನೂ ಆಗಿರುತ್ತಾನೆ.

C ಕಡೆಯಿಂದ ಸಾಗಿದ ಗೋಧಿರೇಖೆ ಸಹಾಯಕರೇಖೆಯೊಡನೆ ಸ್ವಲ್ಪ ದೂರ ಸಾಗಿ, ನಂತರ B ಕಡೆಗೆ ಹೋದಂತೆಲ್ಲ ಸಹಾಯಕರೇಖೆ ಮಹಾಯ ವಾಗಿ, ಕೊನೆಗೆ ಒರಟಾದ ಅಸ್ಪಷ್ಟವಾದ ರೇಖೆ ಉಳಿದಿರುವುದು. ಇದರಿಂದ ಪ್ರಾಯದ ಜೀವನ, ಶ್ರಮ, ಸಮಾಜದಲ್ಲಿ ಅವಹೇಳನ, ಅನುಭವಿಸಿ ಆಯಿತು.

ಚಿತ್ರ ೮೨—D ರೇಖೆಯು ಎರಡು ಸುಳಿಯ ಮಧ್ಯದಲ್ಲಿ ಅಡ್ಡವಾಗಿ ಸಾಗಿದೆ. ಶುರುವಿನಲ್ಲಿ ಮಹಾಸಲಾಗಿಯೂ, (ಶುರುವಿನಲ್ಲಿ ಬಾಲದಂತೆ ಅಂತ್ಯದಲ್ಲಿ ತಲೆ ಕಾಣುವುದು) ದ್ವಿತೀಯಾರ್ಧಭಾಗ ದಪ್ಪವಾಗಿಯೂ, ಅಲ್ಪ ದ್ವೀಪಾಕೃತಿಯನ್ನು ಹೊಂದಿರುವುದು. C ರೇಖೆಯು ಒಂದು ಸುರುಳಿಯ ಕೇಂದ್ರದ ತಲೆಭಾಗವನ್ನು ದೃಷ್ಟಿಸಿರುವುದು. E ರೇಖೆಯು C ರೇಖೆಯನ್ನು ನೋಡುವುದು. ಇದರಿಂದ ಸತಿ-ಪತಿಯರಿಗೆ ಸದಾ ವಾಗ್ ಯುದ್ಧ, ಸಂಸಾರದಲ್ಲಿ ಅಶಾಂತಿ. D ರೇಖೆಯು ಪತ್ನಿಗೆ ಇರುವ ಉದರ ವ್ಯಾಧಿಯನ್ನು ತಿಳಿಸುವುದು.

A, B ರೇಖೆಯು ದೂರದೂರವಾಗಿ ಪೂರ್ಣವಾಗದೆ ನಿಂತಿರುವುದು. ಇದರಿಂದ ಸಂಸಾರದಲ್ಲಿ ಸುಖವಿಲ್ಲ, ಶ್ರಮಜೀವನ ತಪ್ಪಿಲ್ಲ. ಕೊನೆಯ ವರೆಗೆ ಅಶಾಂತಿ ಜೀವನ.

೧೦೪— ಈ ಚಿತ್ರದಲ್ಲಿ A, B ಗೋಧಿರೇಖೆ ಅಸ್ಪಷ್ಟವಾಗಿರುವುದು. ಇದರಿಂದ ಸಾಮಾನ್ಯವೃತ್ತಿಯಿಂದ ಜೀವನ. ಈ ರೇಖೆಯ ಮೇಲೆ ನಾಗ ನಾಲಿಗೆ ರೇಖೆ ಇರುವುದರಿಂದ ವ್ಯಕ್ತಿಗೆ ಸಂತತಿಗಳ ಭಾಗ್ಯವೇ ಇಲ್ಲ.

೮೪—ಈ ಚಿತ್ರದಲ್ಲಿ F ರತಿರೇಖೆಯು ಭಿನ್ನಭಿನ್ನವಾಗಿದೆ. ಪ್ರಥಮ ದಲ್ಲಿ ಒರಟು. ದ್ವಿತೀಯಾರ್ಧದಲ್ಲಿ ಉಪರೇಖೆ (See the Arrow sign) ಭೇದಿಸಿದೆ. ನಂತರ ರೇಖೆಯು ಶಕ್ತಿಹೀನವಾಗಿ ಮೇಲ್ಭಾಗದಲ್ಲಿ

ವಾಯುವಾಗಿದೆ. ಪ್ರಥಮದಲ್ಲಿ ಪರಸ್ತ್ರೀಸಹವಾಸ, ನಂತರ ವಿವಾಹ. ವಿವಾಹವಾದ ಪತ್ನಿಯು ೩ ವರ್ಷವಿದ್ದು ನಂತರ ಓಡಿಹೋದಳು; ದ್ವಿತೀಯ ವಿವಾಹವಾಯಿತು. ಆಕೆಯು ಸಹ ಓಡಿಹೋದಳು. ಕೊನೆಗೆ ವ್ಯಕ್ತಿಯ ಜೀವನ ಅಶಾಂತಿಯಿಂದ ಕೂಡಿತು. ಹಾಗೂ ಮಣಿಹಾರ, ಕೇಸರರೇಖೆಗಳು ಇಲ್ಲದಿರುವುದರಿಂದ ಸಾಮಾನ್ಯವೃತ್ತಿಯಿಂದ ಜೀವನ.

೯೧—ಈ ಅಂಗುಷ್ಠದಲ್ಲಿ C ಕಡೆಯಿಂದ ಸುರುವಾದ ರೇಖೆಯು ಸ್ವಲ್ಪ ದೂರ ಸಾಗಿ ಕತ್ತರಿಸಿದೆ; ಆದರೆ ಸುರುವಿನಭಾಗವು ಸೊಗಸಾಗಿರುವುದು. ಇದರಿಂದ ಈ ವ್ಯಕ್ತಿಯು ಭಾಗ್ಯವಂತರ ಮನೆಯಲ್ಲಿ ಹುಟ್ಟಿದವನು. C. D ರೇಖೆಯು ಸುರುವಿನಲ್ಲಿ ಕತ್ತರಿಸಿದ್ದರೂ ನೇರವಾಗಿ ಶಿಸ್ತಿನಿಂದ ಸಾಗಿರುವುದು. ಇದರಿಂದ ವ್ಯಕ್ತಿಯಲ್ಲಿ ಖಂಡಿತವಾದಿತ್ವ, ಹಿಡಿದ ಕೆಲಸ ಪೂರ್ಣ ಮಾಡುವ ಗುಣವು ಇರುವುದು. ದೈವಭಕ್ತಿ. ಗುರುಹಿರಿಯರ ಸೇವೆ ಮುಂತಾದ ಸತ್ಪಾತ್ರರಾಗಿ ಕೀರ್ತಿ ಗಳಿಸುವರು.

C ರೇಖೆಯು ಸುರುವಾದ ನಂತರ ಕತ್ತರಿಸಿರುವುದು. ಆದರೆ ಕತ್ತರಿಸಿರುವ ಜಾಗದಲ್ಲಿ D ರೇಖೆಯಿಂದ ಹೋಟ ( ಕಲ್ಪವೃಕ್ಷ ) ರೇಖೆಯು ಭೂಮಿಯ ಆವರ್ತದ ಮೇಲೆ ತೆಂಗಿನಮರದಂತೆ ಗರಿಗಳನ್ನು ಬಿಟ್ಟಿರುವುದು. ಇದರಿಂದ ಈ ವ್ಯಕ್ತಿಯು ಹುಟ್ಟಿದ ಊರುಬಿಟ್ಟು ಪತ್ನಿಯ ಮನೆ ಸೇರಿದನು. ಪತ್ನಿಯ ಮನೆಯು ಸಹಾಯದಿಂದ ವಿಶೇಷ ಭಾಗ್ಯವೃದ್ಧಿಯು ಉಂಟಾಯಿತು. (D ರೇಖೆಯು ಪತ್ನಿಯ ಮನೆ, ಈ ರೇಖೆಯ ಮೇಲಿಂದ ತೆಂಗಿನಮರ ನಿಂತಿರುವುದು). ವೃಕ್ಷಗಳಲ್ಲಿ ತೆಂಗಿನಮರಕ್ಕೆ ಕಲ್ಪವೃಕ್ಷ ವೆಂದು ವಿಶೇಷ ಪ್ರಾಧಾನ್ಯತೆ ಕೊಟ್ಟಿರುವರು. ಅದರಂತೆ ವ್ಯಕ್ತಿಯು ನೀರಾವರಿ ಯೋಜನೆಯ ಮಂತ್ರಿಯಾಗಿ ದೇಶಕ್ಕೆ ಮಹತ್ತರ ಸೇವೆ ಸಲ್ಲಿಸಿ ಮತ್ತು ಅನೇಕ ಶಿಕ್ಷಣಸಂಸ್ಥೆ, ಮಾರ್ಗವಿಸ್ತರಣೆ (Roads) ಗೋಸ್ಕರ ಸದಾ ದುಡಿದವರಾದರು. ಇಂದೂ ಸಹ ಮಹತ್ತರ ಸ್ಥಾನಮಾನವುಳ್ಳವರಾಗಿರುವರು.

ಅಂಗುಷ್ಠದ ಶಿರದಲ್ಲಿ ನಕ್ಷತ್ರದ ಗುರುತು ಇರುವುದರಿಂದ ಇವರ ತಂದೆಯು ಸಹ ದೈವಭಕ್ತರು, ರಾಜಕಾರಣಪಟುವು ಮತ್ತು ಪರೋಪ-

ಕಾರಿಗಳು ಆಗಿದ್ದರು. ಮತ್ತೊಂದು ರೇಖೆಯು B ಸಹ ಈ ವ್ಯಕ್ತರೇಖೆಗೆ ಸಹಕರಿಸುವುದು. ಇದರಿಂದ ಅಂತ್ಯದಲ್ಲೂ ಮಹತ್ತರ ಕೀರ್ತಿ ಲಭಿಸಿರುವುದು. E ಇಬ್ಭಾಗವಾದ ಮುಳ್ಳಿನಂತಹ ರೇಖೆ ಮತ್ತು ಈ ಮುಳ್ಳುರೇಖೆಗಳ ಮಧ್ಯದಿಂದ ಹೊರಟ ಉಪರೇಖೆಯು ಅತಿ ಸೂಕ್ಷ್ಮವಾಗಿ D, C ರೇಖೆಗಳನ್ನು ಭೇದಿಸಿ ಕೆಳಗಿಳಿದಿರುವುದರಿಂದ ವ್ಯಕ್ತಿಗೆ ಸಂತತಿಭಾಗ್ಯವಿಲ್ಲ. ಆದರೂ ಪರರ, ಬಂಧುಗಳ ಮಕ್ಕಳನ್ನೇ ತನ್ನ ಮಕ್ಕಳಿಗಿಂತ ಹೆಚ್ಚಿನ ರೀತಿಯಲ್ಲಿ ಪೋಷಿಸಿರುವರು. D ಕಡೆಯಲ್ಲಿ ಗೋಧಿರೇಖೆಯು ಸೇರದೇ ಇರುವುದರಿಂದ ತನಗೆ ಲಭಿಸಿದ ಆಸ್ತಿ, ಐಶ್ವರ್ಯವನ್ನು ಅಂತ್ಯದಲ್ಲಿ ಸರ್ವರಿಗೂ ದಾನ ಮಾಡುತ್ತಿರುವ ಗುಣ ಸೂಚಿಸುವುದು. ಅಂತ್ಯದಲ್ಲಿ ಒಂದು ರೇಖೆ ಇನ್ನೊಂದು ರೇಖೆಯನ್ನು ಸೇರದಿದ್ದರೂ ಅಂದವಾಗಿ ಕತ್ತರಿಸದೆ ಇರುವುದು. ಇದರಿಂದ ಐಶ್ವರ್ಯ ಸದ್ವಿನಿಯೋಗವಾಗುತ್ತಿರುವುದು [ವಿ. ಸೂ :— ಅಂತ್ಯದಲ್ಲಿ ಈ ರೇಖೆಯು ಛಿನ್ನ ಛಿನ್ನವಾಗಿದ್ದರೆ ನೀತಿಬಾಹಿರರಿಗೆ, ಅನ್ಯಾಯಕ್ಕೆ ಇವರ ಐಶ್ವರ್ಯ ಸೇರುತ್ತಿತ್ತು.]

ಚಿತ್ರ ೮, ೧೦, ೧೯, ೩೦—ಈ ಚಿತ್ರದಲ್ಲಿ ವೃತ್ತದ ಗುರುತಿನಲ್ಲಿ A ಸಂಕಲನ ಚಿಹ್ನೆಯು ಕಾಣುವುದು. ಇದರಿಂದ ವ್ಯಕ್ತಿಯು ಪ್ರಥಮದಿಂದ ಹೊಂದಿದ್ದ ಸ್ತ್ರೀ ಸ್ನೇಹಸುಖವು ಕೆಲವು ವರ್ಷಗಳಿದ್ದು, ನಂತರ ಆಕೆಯು ಈತನನ್ನು ಬಿಟ್ಟು ಪರಪುರುಷನೊಡನೆ ಓಡಿಹೋದಳು. ಪುನಃ ಈ ವ್ಯಕ್ತಿ ವಿವಾಹವಾದನು. ಆದರೂ ಸಂಸಾರ ಅಶಾಂತಿಯಿಂದ ಕೂಡಿದ್ದಿತು. B ಯಿಂದ ಹೊರಟ ರಿಪುರೇಖೆಯು (Line of enemy) ಸಂಕಲನ ಚಿಹ್ನೆಗೆ ಸೇರುವುದರಿಂದ ಸ್ತ್ರೀಯರಿಂದ ಉಂಟಾದ ಅನೇಕ ಶತ್ರುಗಳನ್ನು ಈ ವ್ಯಕ್ತಿ ಎದುರಿಸಿದನು. E, F ಶತ್ರುರೇಖೆಯು, ರತಿರೇಖೆಯನ್ನು ಗೋಧಿರೇಖೆಯನ್ನು ಭಂಗಗೊಳಿಸಿದೆ, ಇದರಿಂದ ವ್ಯಕ್ತಿಗೆ ಸ್ತ್ರೀಯರಿಂದ ದ್ರವ್ಯ, ಮಾನ ಹಾನಿಗಳು ಅತಿಯಾಗಿದ್ದವು.

ಚಿತ್ರ ೭೨—ಅಂಗಾರಕ ಸಂಕೇತದ ( From the Mars sign ) ಕಡೆಯಿಂದ ಹೊರಟಿರುವ ಬಿಳಿಛಾಯೆಯು ಸುಳಿಯ ಕೇಂದ್ರದಲ್ಲಿರುವ ದುಂಡಾದ ಬಿಂದುವನ್ನು (ಕೇಂದ್ರವನ್ನು) ಸೇರಿದೆ. ಹೀಗೆ ಸೇರುವಾಗ

ಪಾರ್ಶ್ವದ ಪದರಗಳನ್ನು ಭೇದಿಸಿರುವುದು. ಇದರಿಂದ ಈ ವ್ಯಕ್ತಿಗೆ ಶಬ್ದ ಗ್ರಹಣ ಶಕ್ತಿಯು ವಾಯವಾಗಿರುವುದು (ಕಿವುಡು).

C. A. B ರೇಖೆಗಳು ಭಿನ್ನವಾಗಿ ಶಕ್ತಿಗುಂದಿರುವುವು. ಮತ್ತು ತಾರಾ, ಕೇಸರ, ಮಧುರ ರೇಖೆಗಳು ಇಲ್ಲದಿರುವುದರಿಂದ ವಿದ್ಯಾಭಂಗ, ಕಷ್ಟಾರ್ಜಿತದಿಂದ ಸಂಪಾದನೆಯು; D. E ರತಿರೇಖೆಯು ಡೊಂಕು ಡೊಂಕವಾಗಿ G ಮಧ್ಯದಲ್ಲಿ ಭಿನ್ನವಾಗಿರುವುದರಿಂದ ಪರರ ಪಶಾತಿಗೆ ಕಿವಿ ಗೊಟ್ಟು ಕಟ್ಟಿಕೊಂಡ ಪತ್ನಿಯನ್ನೂ, ಕೆಲವು ವರ್ಷಗಳ ವರೆಗೆ ಬಿಟ್ಟಿದ್ದವನೂ ಆಗಿದ್ದನು.

೧೩೦—ಈ ಚಿತ್ರದಲ್ಲಿ C ಕೆಳಭಾಗದಲ್ಲಿ ೨ ಗೋಧಿರೇಖೆಯು F ಬಳಿಯಲ್ಲಿ ಭಿನ್ನವಾದ ಮತ್ತೊಂದು ರೇಖೆ ಇರುವುದು. C ಬಳಿಯಿಂದ ಹೊರಟ ನಾಗ ನಾಲಿಗೆ (V Sign on the Earth) ರೇಖೆಯ ಶಾಖೆಗಳು A ಮತ್ತು K ಭಾಗಗಳಿಗೆ ಸಾಗಿರುವುದು. ಈ ರೇಖೆಯನ್ನು D. E ಮತ್ತೊಂದು ಗೋಧಿರೇಖೆಯು ಭೂಮಿಯ ಆವರ್ತದಲ್ಲಿ ಬಂದು ನಾಗ ನಾಲಿಗೆ ರೇಖೆಯನ್ನು ಭಂಗಗೊಳಿಸಿರುವುದು. ಇದರಿಂದ ಮತ್ತು C ಯಿಂದ E ಭಾಗದಲ್ಲಿ ಚೌಕವು F. D. B ತ್ರಿಶೂಲದಾಕಾರ ರೇಖೆಯು ಮತ್ತು ೪ ಗೋಧಿರೇಖೆಯು ಇರುವುದರಿಂದ ಈತನು ೧೨ ಜನ ಗಂಡುಮಕ್ಕಳುಳ್ಳವನು (ಚಕ್ರಕೇಂದ್ರದಲ್ಲಿ ದುಂಡಾದ ಬಿಂದು ಇರುವುದು. ವಂಶವೃದ್ಧಿ ತಿಳಿಸುವುದು). ಮತ್ತು I ಪಾರ್ಶ್ವದಲ್ಲಿ ಕೇಸರರೇಖೆಗಳು J ವಿಭಾಗದಲ್ಲಿ ಚೌಕ ತ್ರಿಕೋಣ ರೇಖೆಗಳು ಇರುವುದರಿಂದಲೂ ಈತನು ವಾಣಿಜ್ಯವೃತ್ತಿಶೀಲನು ಮತ್ತು ಈರ್ವರು ಸ್ತ್ರೀಸುಖವುಳ್ಳವನೂ, ಪರೋಪಕಾರಿಯೂ ಆಗಿರುತ್ತಾನೆ.

ಚಿತ್ರ ೧೩೧—ಈ ಅಂಗುಷ್ಠದಲ್ಲಿ ಮೂಲಿಕಾರೇಖೆಯಲ್ಲಿ ಡಮರುಗದ ಆಕಾರವಾದ ಚಿಹ್ನೆಯು ಅಂಗುಷ್ಠದ ಪ್ರಥಮ (Will portion) ಭಾಗದಲ್ಲಿರುವ ಶಂಖದ ಮೇಲ್ಭಾಗದಲ್ಲಿ ತ್ರಿಕೋಣ, ಚೌಕರೇಖೆಗಳು ವಿಶೇಷವಾಗಿರುವುವು. ಇದರಿಂದ ಈತನು ಪರೋಪಕಾರಿಯು, ಬಡಬಗ್ಗರಿಗೆ ಆಶ್ರಯದಾಯಕನೂ, ಸಮಾಜಕಲ್ಯಾಣ ಮುಂತಾದ ಸಂಸ್ಥೆಗೆ

ಯಥೋಚಿತ ಸಹಾಯ ಮಾಡಿದವಳೂ, ದೈವಭಕ್ತಿಯುಳ್ಳವಳೂ ಆಗಿರುತ್ತಾಳೆ. ಗೋಧಿರೇಖೆಯು G, E ಕಡೆಯಿಂದ F ವರೆಗೆ ಗೋಪುರದಂತೆ ಕಾಣುವುದು. ಮತ್ತು D ಕಡೆಯಿಂದ ಹೊರಟ ರೇಖೆ G ಗುರುತಿನ ಮುಂದೆ ಧ್ವಜದ ಆಕಾರ ಹೊಂದಿರುವುದರಿಂದ ವಿಶೇಷ ಐಶ್ವರ್ಯವಂತಳೂ ರಾಜಪತ್ನಿಯೂ ಆಗಿದ್ದಾಳೆ. ಆದರೆ E ಸೂಚನಾ ಗುರುತಿನಿಂದ ವಿ (V) ಗುರುತು ಇರುವುದು. (ನಾಗ ನಾಲಿಗೆ ಇದರಿಂದ) ಮತ್ತು ಶಂಖದ ಕೇಂದ್ರವು ಭಿನ್ನವಾಗಿರುವುದರಿಂದ ದೇವಾಲಯಾದಿ ವಿಶೇಷ ಸಮಾಜ ಕಾರ್ಯವನ್ನು ಮಾಡುವಳು. ೧೩೨ನೆಯ ಹಸ್ತವು ಮೇಲೆ ವಿವರಿಸಿರುವವರ ಬಲ ಅಂಗುಷ್ಠವಾಗಿರುವುದು. ಈ ಅಂಗುಷ್ಠದಲ್ಲಿ G ಸಂತತಿಹೀನರನ್ನಾಗಿ ಮಾಡಿರುವ ಶತ್ರುರೇಖೆ.

D ಹೂವಿನ ಬುಡ A, B, C, H ಪದ್ಮ ಆಕಾರ–ಇದು ಮಂತ್ರಿಯ ಪತ್ನಿ ಹಾಗೂ ರಾಜಪತ್ನಿಯರ ಭವ್ಯಭಾಗ್ಯದ ಗುರುತು.

# PLATE No.III

A ಮತ್ತು M, B ಬೆರಳುಗಳಲ್ಲಿರುವ ಭಿನ್ನವಾದ ಶಂಖುಗಳು ಮತ್ತು ಅತಿ ಒರಟಾಗಿ ದಪ್ಪವಾದ ರೇಖೆಗಳು ಕಂಡರೆ ಕೂಲಿಯಿಂದ ಜೀವನ; ಐಶ್ವರ್ಯ, ಸುಖ ಬರೀ ಕನಸಾಗಿರುವುದು ಕಠಿಣವೃತ್ತಿಯಿಂದಲೇ ಜೀವನ ಎಂಬ ಸೂಚನೆ.

L, B ಈ ಚಿತ್ರದಲ್ಲಿರುವಂತೆ ಅಲ್ಪ ಭಿನ್ನವಾದ ಚಕ್ರಗಳಿದ್ದರೆ ವ್ಯಕ್ತಿಯು ಸಾಮಾನ್ಯ ಶ್ರಮಜೀವಿ. ಹಾಗೂ ೩೫, ೩೮ ರಿಂದ (ವಯಸ್ಸಿನಿಂದ) ಅವನಿಗೆ ಭಾಗ್ಯೋದಯ.

G ೩—ಈ ಚಿತ್ರದ ಮೇಲೆ ಸಿರಿರೇಖೆಗಳಿಂದ ( Seri Rekha ) ಕೂಡಿದ ಚೌಕ ತ್ರಿಕೋಣಗಳು ಉದ್ದನೆಯ (ಸಿರಿರೇಖೆಗಳು) ರೇಖೆಗಳು ಇರುವುದರಿಂದ ಪರೋಪಕಾರಿಗಳು, ಸುಖಭೋಗಪಡೆಯುವಲ್ಲಿ ದೃಢಪಡೆಯುವವರೂ ಅಧಿಕಾರಿಗಳೂ ಆಗಿರುತ್ತಾರೆ. ಇವರುಗಳಿಗೆ ಮನೆತನದ ಆಸ್ತಿ, ಐಶ್ವರ್ಯಗಳ ಸಹಾಯ ಅತಿಯಾಗಿ ಲಭಿಸುವುದು, ವಾಹನಾದಿ ಸುಖ, ಸಮಾಜದಲ್ಲಿ ಕೀರ್ತಿಯೂ ಲಭಿಸುವುವು.

G ೪. G ೫ ಈ ಎರಡು ಬೆರಳುಗಳಲ್ಲಿರುವ ಚಕ್ರಾಕಾರವು ೯೦% ಭಾಗ ಶುದ್ಧವಿರುವ ಶುಭಚಕ್ರವು. ಮಹತ್ತರ ಯೋಗ ಲಭಿಸುವುದು. ಈ ವ್ಯಕ್ತಿಗಳು ಅನೇಕ ವಾಹನ, ಕೈಗಾರಿಕಾಸಂಸ್ಥೆ, ಕೋಟ್ಯಂತರ ರೂಪಾಯಿಗಳ ಬಂಡವಾಳಶಾಹಿಗಳಾಗಿರುವರು. ಮತ್ತು ದಾನ-ಧರ್ಮ ಗುಣ, ಸ್ತ್ರೀವಿಲಾಸಿಗಳು, ಭಾಗ್ಯಗುಣವತಿಯಾದ ಪತ್ನಿಭಾಗ್ಯ, ಭ್ರಾತೃಗಳುಳ್ಳವರೂ ಪುತ್ರ-ಪುತ್ರಿಯರುಳ್ಳವರೂ ಆಗಿರುತ್ತಾರೆ. ಭಾರತೀಯ ಶಾಸ್ತ್ರದಂತೆ ವ್ಯಕ್ತಿಗಳ ಬೆರಳುಗಳ ಈ (G ೪) ರೀತಿ ಚಕ್ರವು ಸಮಾಯೋಗ ಭಾಗ್ಯವನ್ನು ಕೊಡುವುದು.

G ೬. A. B ಮತ್ತು C, D ದಮರುಗದ ಹೊರಪಾರ್ಶ್ವಗಳು, ಈ ಚಿಹ್ನೆಯು ವಿಶೇಷವಾಗಿ ಮಣಿಕಟ್ಟುರೇಖೆಯಲ್ಲಿ ಕಾಣಸುವುದು. (ಹಾಗೂ ಎರಡು ತ್ರಿಕೋಣಗಳ ಜೋಡಣೆಯ ಗುರುತು) ಈ ಚಿಹ್ನೆಯುಳ್ಳ ವ್ಯಕ್ತಿಗಳು, ಯಂತ್ರಗಳ ವ್ಯತ್ತಿಶಾಖೆ, ಕಂಟ್ರಾಕ್ಟ್ ಇಂಜನಿಯರ್ ಮುಂತಾದ ಭಾರೀ ಸಂಸ್ಥೆಗಳಲ್ಲಿ ಅಧಿಪತಿಗಳಾಗಿ ವಿಶೇಷ ಕೀರ್ತಿ, ಸುಖ ಪಡೆಯುವರು. ಇವರುಗಳಿಗೆ ಪಿತ್ರಾರ್ಜಿತವಾದ ದ್ರವ್ಯ, ಭೂಮಿಯು ಏಳಿಗೆಗೆ ಅವಕಾಶ ಕೊಡುವುದು.

A. R ಗೋಧಿರೇಖೆಯ ಮೇಲೆ ವರ್ತುಲದೊಳಗೆ ಸರ್ಪದ ಮರಿಯು ಬಾಯಿಬಿಟ್ಟಂತೆ ಇರುವುದು. ಇದರಿಂದ ವ್ಯಕ್ತಿಯು ವೃತ್ತಿಗಳನ್ನು ಆಗಾಗ್ಗೆ ಬದಲಾಯಿಸುವವನು ಆಗಿರುತ್ತಾನೆ.

V ೨—ಈ ಚಿತ್ರದಲ್ಲಿ ಇರುವಂತಹ A. B ಗೋಧಿರೇಖೆಯು ಯಾವ ವ್ಯಕ್ತಿಗಳ ಹಸ್ತದಲ್ಲಿ ಇರುವುದೋ ಅವರುಗಳು ಅತಿ ಕಷ್ಟ, ರೋಗ, ಪತ್ನಿ ವಿಯೋಗಗಳನ್ನು ಅನುಭವಿಸಿ ಅಂತ್ಯದಲ್ಲಿ ಕಷ್ಟದಿಂದ ಜೀವನವು ಕೊನೆಗಾಣುವುದು.

G ೭— ಈಚಿತ್ರದಲ್ಲಿ ಬೆರಳಿನ ಶಿರದಲ್ಲಿ ನೀಳವಾದ ಸೊಗಸಾದ ಕೇಸರ ರೇಖೆಯು ಇರುವುದು. ಈಕೆಯು ವಿಶೇಷ ಭಾಗ್ಯವತಿಯೂ, ವಿದ್ಯಾವತಿಯೂ ಆಗಿರುತ್ತಾಳೆ.

G ೮ —ಬೆರಳಲ್ಲಿರುವಂತೆ ಸ್ತ್ರೀ-ಪುರುಷರುಗಳಲ್ಲಿ ಇಂತಹ ಮತ್ತು ಮೇಲೆ ಹೇಳಿದ (G ೭) ದಂತಹ ತಾರಾ, ಕೇಸರರೇಖೆಗಳು ಶೋಭಿಸುವುದೋ ಅಂತಹವರು ನಾನಾ ವಾಹನ ಸೇವಕರು, ಸುಂದರವಾದ ಅನೇಕ ಮಂದಿರಗಳು, ವಜ್ರ-ವೈಢೂರ್ಯಗಳುಳ್ಳವರಾಗಿಯೂ ಹೆಚ್ಚಾಗಿ ಸ್ತ್ರೀಸಂತಾನವುಳ್ಳವರಾಗಿಯೂ, ಸುಂದರವಾದ ಸತಿ-ಪತಿಯುಳ್ಳವರೂ ಸಮಾಜದಲ್ಲಿ ಅತ್ಯಂತ ವೈಭವಯುತರಾಗಿಯೂ ಶೋಭಿಸುವರು.

ಮೇಲೆ ಹೇಳಿದ ತಾರಾ, ಕೇಸರರೇಖೆಗಳು ಯಾವ ಬೆರಳಲ್ಲಿ ಸುಂದರವಾಗಿ ಕಂಡರೂ ಮಹತ್ತರ ಶುಭಫಲದಿಂದೊಡಗೂಡಿದ ಜೀವನ ಸಾಗಿಸುವರು.

## ಶಂಖ-ಚಕ್ರಗಳ ಜ್ಞಾನ

(ವಿಷಯ : ಪುಟ-೧೦೫ ರಲ್ಲಿ )






## ಶಂಖ-ಚಕ್ರಗಳ ಸೂಕ್ಷ್ಮಜ್ಞಾನ

೧ ನೆಯ ಚಿತ್ರದಲ್ಲಿ ಕಾಣುವ ಚಕ್ರವು ಭಿನ್ನವಾಗಿಲ್ಲ; ಆಕಾರವು ಸುಂದರವಾಗಿರುವುದು. ಈ ರೀತಿಯ ಚಕ್ರಗಳು ಐಶ್ವರ್ಯ, ಸುಖ, ಕೀರ್ತಿ, ಅಧಿಕಾರವನ್ನು ಕೊಡುವವು.

೨ ನೆಯ ಚಿತ್ರದಲ್ಲಿರುವಂತಹ ಶಂಖವೂ ಸಹ ಮೇಲೆ ಹೇಳಿದ ಸಕಲೈಶ್ವರ್ಯಗಳನ್ನು ಈಯುತ್ತದೆ.

೧ ಮತ್ತು ೨ ರೀತಿಯ ಚಕ್ರ ಅಥವಾ ಶಂಖವುಳ್ಳ ವ್ಯಕ್ತಿಗಳು ಭಾಗ್ಯವಂತರ ಮನೆಯಲ್ಲಿ ಹುಟ್ಟಿದವರೂ, ರಾಜಯೋಗವುಳ್ಳವರೂ ಆಗಿರು ತ್ತಾರೆ.

೩ ಮತ್ತು ೪ ನೆಯ ಚಿತ್ರದಲ್ಲಿರುವಂತಹ ಅಲ್ಪಸ್ವಲ್ಪ ಭಿನ್ನವಾಗಿರು ವಂತಹ ಶಂಖ-ಚಕ್ರವುಳ್ಳ ವ್ಯಕ್ತಿಗಳು ಮಧ್ಯಮ ಸುಖಿಗಳು.

೫ ನೆಯ ಚಿತ್ರದಲ್ಲಿರುವಂತಹ ಹೆಚ್ಚು ಭಿನ್ನವಾದ ಶಂಖ, ಚಕ್ರ, ಕಳಶಾಕೃತಿಗಳುಳ್ಳ ವ್ಯಕ್ತಿಗಳು ಅತ್ಯಂತ ಕಷ್ಟದಿಂದ ಜೀವನವನ್ನು ಸಾಗಿ ಸುವರು. ಇವರುಗಳು ಅವಿದ್ಯಾವಂತರು ಕನಿಷ್ಠವೇತನದಿಂದ ಅಥವಾ ಸೇವಕವೃತ್ತಿಯಿಂದ ಜೀವನ ಸಾಗಿಸುವರು.

Jupitor (Ist Fingure) ಗುರುಬೆರಳು ೧, ೨, ೩ ಭಾಗಗಳು ಸ್ಫೂರ್ತಿಯುತವಾಗಿವೆ. ಇಂಥ ವ್ಯಕ್ತಿಗಳು ತಾಳ್ಮೆಯ ಗುಣವುಳ್ಳವರೂ, ಸ್ಥೂಲಶರೀರಿಗಳೂ, ವ್ಯವಹಾರವಿಚಕ್ಷಣರೂ, ಕರ್ತೃತ್ವಶಾಲಿಗಳೂ, ಕೀರ್ತಿ ಯುತ-ಭಾಗ್ಯವಂತರೂ, ಅಧಿಕಾರ-ಸಂಪಾದನಾಕ್ಷೇತ್ರದಲ್ಲಿ ಪಂಡಿತರೂ, ಪರೋಪಕಾರಿಗಳೂ, ದೈವಭಕ್ತರೂ ಆಗಿರುವರು.

ಪುರುಷರ ಬೆರಳು ಚಿತ್ರ ೬ ಗುರುಬೆರಳ ಮುಂದೆ S ಮತ್ತು T ವಿಭಾಗಗಳು ಉಬ್ಬಿಯೂ, ದುಂಡಾಗಿಯೂ, ಅಂದವಾಗ ಟಣ್ಣವುಳ್ಳದ್ದಾ ಗಿಯೂ ಇದ್ದುದಾಗಿ, ಉದ್ದವಾದ ೨ ಅಥವಾ ೩ ಕ್ಕಿಂತ ಹೆಚ್ಚಾದ ಗೆರೆಗಳು ಇದ್ದುದಾದರೆ ವ್ಯಕ್ತಿಗಳು ನಿಧಾನ ವಿವೇಚನಾಶಕ್ತಿಯುಳ್ಳವರೂ, ಸುಲ ಭೋಪಾಯದನ್ವಿತಿಗಳಿಂದ ಐಶ್ವರ್ಯಹೊಂದುವವರೂ, ಸುಂದರವಾದ

ಮಂದಿರಗಳನ್ನು ನಿರ್ಮಿಸುವವರೂ ಆಗಿರುತ್ತಾರೆ. ಮಧ್ಯಮವರ್ಗದವರಿಗಿಂತ ಅಲ್ಪ ಉತ್ತಮ ಐಶ್ವರ್ಯ ಹೊಂದಿರುತ್ತಾರೆ.

ಸ್ತ್ರೀಯರ ಬೆರಳು ಚಿತ್ರ ೭ ಶಂಖ, ಚಕ್ರದ ಆಕಾರದ ಮೇಲೆ ಕಿರು ರೇಖೆಗಳು ಊರ್ಧ್ವಮುಖವಾಗಿ ಸಾಗಿರುವುವು. ಈ ರೇಖೆಗಳಿಗೆ ಸಿರಿರೇಖೆ ಎಂದು (Line of Laksmi or Siri) ಕರೆದಿರುವುದು. ಈ ರೇಖೆಯು ೭ನೆಯ ಗುರುತಿನ ಕೆಳಭಾಗದಲ್ಲಿ ಅಪರಿಮಿತವಾಗಿರುವುದು. ಇಂತಹ ಚಿಹ್ನೆಯುಳ್ಳವರು ಅತ್ಯಂತ ಕೀರ್ತಿ, ಭಾಗ್ಯ, ಸೇವಕರುಗಳು, ವಾಹನಾದಿಗಳುಳ್ಳವರೂ ಆಗಿರುತ್ತಾರೆ. ಇವರು ಹುಟ್ಟಿದ ಹಾತ್ತು ವಿವಾಹವಾದ ಮನೆಗಳೆರಡೂ ವಿಶೇಷ ವಿಜೃಂಭಣೆಯುಳ್ಳವಾಗಿರುವುವು. ಈ ಸಿರಿರೇಖೆಗಳು ಹೆಚ್ಚಾಗಿದ್ದರೆ ರತ್ನ–ವಜ್ರಾದಿಗಳು, ಸುವರ್ಣವು ಅತಿಯಾಗಿ, ಅನಾಯಾಸವಾಗಿ ಇವರುಗಳಿಗೆ ಕೈಸೇರುವುವು. ಅದೇ ರೀತಿ ಸ್ತ್ರೀಸಂತಾನ ಅತಿಯಾಗುವುದು. (ಮೇಲೆ ಹೇಳಿದ ೬ನೆಯ ಚಿತ್ರದವರಿಗಿಂತ ಹತ್ತು ಪಾಲು ಭಾಗ್ಯ ಯೋಗ ಅತಿಯಾಗಿರುತ್ತದೆ).

ಮೇಲೆ ಹೇಳಿದ ೬ ಮತ್ತು ೭ ಈ ಎರಡು ಬೆರಳುಗಳಲ್ಲಿರುವಂತೆ ಸಿರಿರೇಖೆ ಸ್ತ್ರೀ ಅಥವಾ ಪುರುಷನಿಗಾಗಲೀ ಇನ್ನಲ್ಲಿ ಶುಭಫಲ ತಪ್ಪದೇ ಜರುಗುವುದು. (ಆದರೆ "ಭೋಗೇ-ರೋಗಭಯಂ" ಎಂಬಂತೆ ಇವರುಗಳು ಅತ್ಯಲ್ಪ ಆಹಾರ ಸೇವಿಸುವವರೂ, ಯಾವುದೋ ವ್ಯಾಧಿ ಅನುಭವಿಸುವವರೂ ಆಗಿರುತ್ತಾರೆ.)

ಚಿತ್ರ ೮—S ದಿಂದ M ವರೆಗೆ ಇರುವ ಗೋಧಿರೇಖೆಯು ಮಧ್ಯಮ ಶುಭವಿರುವುದು. ಕಿರುರೇಖೆಗಳಿಂದ ಒಡಗೂಡಿದ ಗೋಧಿರೇಖೆಯು ಇರುವುದು. ವ್ಯಕ್ತಿಯು ಮನೆತನದವರು ವಿಶೇಷ ಐಶ್ವರ್ಯವಂತರು. ಆದರೆ ಈ ವ್ಯಕ್ತಿಯು ೪೦ನೆಯ (M) ವಯಸ್ಸಿನೊಳಗೆ ಸರ್ವಭಾಗ್ಯವೂ ವ್ಯಯವಾಯಿತು. Mದಿಂದ T, L ವರೆಗೆ ವಿಶಾಲವಾದ ರೇಖೆಯು ಇದ್ದರೂ ಅಂತ್ಯದಲ್ಲಿ ಒಂದಕ್ಕೊಂದು ಕೂಡಿರುವುದಿಲ್ಲ. ಇದರಿಂದ ಈತನು ಉಂಟಾದ ಲಾಭವನ್ನೆಲ್ಲಾ ವೃಥಾ ವ್ಯಯಮಾಡಿದನು. M, T ರೇಖೆಯ ಮೇಲೆ (೪ ಮತ್ತು ೩) ನಾಗನಾಲಿಗೆ ರೇಖೆಯು ಇರುವುದು. ಇದರಿಂದ ಈ ವ್ಯಕ್ತಿಗೆ ಸಂತತಿ



| | ಹೆಸರು | ಸಂಜ್ಞೆ | | ಹೆಸರು | ಸಂಜ್ಞೆ |
|---|---|---|---|---|---|
| ೧ | ರವಿ | ☉ | ೭ | ಶುಕ್ರ | ♀ |
| ೨ | ಚಂದ್ರ | ☽ | ೮ | ಶನಿ | ♄ |
| ೩ | ಮಂಗಳ | ♂ | ೯ | ಹರ್ಷಲ | ♅ |
| ೪ | ಬುಧ | ☿ | ೧೦ | ನೆಪಚ್ಯೂನ | ♆ |
| ೫ | ಗುರು | ♃ | ೧೧ | ಪ್ಲೂಟೊ | ♇ |
| ೬ | ರಾಹು | ☊ | ೧೨ | ಕೇತು | ☋ |

ಗಳೇ ಇಲ್ಲ. ಪುನ ಉದ್ದವಾಗಿ ಬಾಯಿಬಿಟ್ಟಂತೆ [೧ ಮತ್ತು ೨] ರೇಖೆ M ಗುರುತಿನಿಂದ ಸ್ವಲ್ಪ ಮುಂದೆ ಭೂಮಿ, ಚಕ್ರಭಾಗ ತಗಲುವಂತೆ ನಿಂತಿರುವುದರಿಂದ ವ್ಯಕ್ತಿಗೆ ಪತ್ನಿಯರು ಇಬ್ಬರು, ಉಪಪತ್ನಿಯರು ಇಬ್ಬರು ಇದ್ದರು.

X. Y ರೇಖೆಯ ಮಧ್ಯದಲ್ಲಿ ಒಂದು [ಕಪ್ಪು ರೇಖೆಯ ಸೂಚನೆ ಬಳಿ] ದುಂಡಾದ ಬಿಂದು ಇರುವುದು. ಇದೇ ಲಗ್ನದಲ್ಲಿರುವ ಶುಭಗ್ರಹದ ಸಂಕೇತ.

ಗೋಧಿರೇಖೆಯು ಭಿನ್ನಭಿನ್ನವಾಗಿರುವುದು. ೧, ೨, ೩ ಶಾಖಾ ರೇಖೆಗಳು ಇವುಗಳಿಂದ ಸಂಸಾರದಲ್ಲಿ ಅಶಾಂತಿ, ಪತ್ನಿಗೆ ವ್ಯಾಧಿಯು ಇರುವುದು.

ಚಿತ್ರ ೯ ಅಂಗುಷ್ಠದ ಮಧ್ಯಭಾಗದಲ್ಲಿ [In the first phalange of thumb] ಅತ್ಯಗಲವಾಗಿ ಸರ್ಪರೇಖೆಯು ಸಾಗಿರುವುದು. F ಬಾಲದ ಭಾಗ A, B ತೆರೆದ ಭಾಗ [A, B open mouth of the Snake] ಇದರಿಂದ ವ್ಯಕ್ತಿಗೆ ಸಂಸಾರಭಂಗವು ಉಂಟಾಯಿತು. D ಮತ್ತು C ರೇಖೆಯು ದೂರದೂರವಾಗಿ ಸಾಗಿದೆ. ಈ ರೇಖೆಯನ್ನು C ರೇಖೆಯು ಭೇದಿಸಿದೆ. ಹೀಗೆ ಭೇದಿಸಿ ಹೊರಟ ಶತ್ರುರೇಖೆಯು ಸರ್ಪರೇಖೆಯನ್ನು ಭೇದಿಸಿ ಶಂಖದ ಕೇಂದ್ರದ ಹತ್ತಿರ ಸಾಗಿದೆ. ಇದರಿಂದ ಈ ವ್ಯಕ್ತಿಗೆ ಎರಡಕ್ಕಿಂತ ಹೆಚ್ಚು ಸಂಸಾರಭಾಗ್ಯವು. ಪ್ರಥಮ ಪತ್ನಿಯು ಆಕಸ್ಮಿಕ ಮರಣಕ್ಕೆ ಈಡಾದಳೆಂದು ತಿಳಿಸುವುದು.

೮ ನೆಯ ಚಿತ್ರದಲ್ಲಿ ಸುಳಿಯು ಭಿನ್ನವಾಗಿರುವುದರಿಂದ ಸಂತತಿಗಳಿಲ್ಲ. ೯ ನೆಯ ಚಿತ್ರದಲ್ಲಿ ಸುಳಿಯು ಸ್ವಲ್ಪ ಶುಭವಿರುವುದರಿಂದ ಸಂತತಿಗಳುಂಟು. ಆದರೆ ೮ನೆಯ ಚಿತ್ರದಲ್ಲಿ ೧, ೨, ೩ ರೇಖೆಯ ಭಾಗಗಳು ೯ನೆಯ ಚಿತ್ರದಲ್ಲಿ C ಕಡೆಯಿಂದ ಹೊರಟ ರೇಖೆಯು, ಭೂಮಿಪದರದ ಮೇಲೆ ಸೂಕ್ಷ್ಮವಾದ ೩ ಗೆರೆಗಳು ಇರುವುದರಿಂದ ಇಬ್ಬರಿಗೂ ನಾಟಕ, ಸಟ್ಟಾ ಜೂಜಾಗಳಲ್ಲಿ ಆಸಕ್ತಿ; ಆದರೆ ನಷ್ಟವೇ ಹೆಚ್ಚು. ಇಬ್ಬರಿಗೂ ನರನಿಶ್ಶಕ್ತಿ, ಉದರರೋಗ ಇರುವುದು.

ಚಿತ್ರ IV ಈ ಹೆಬ್ಬೆರಳು ಹಿಂಭಾಗಕ್ಕೆ ಅತಿಯಾಗಿ ಬಾಗುವುದೂ, ಇರುವ ಶಂಖದ ಆಕಾರವು ಭಿನ್ನಭಿನ್ನವಾಗಿರುವುದೂ. ವ್ಯಕ್ತಿಯು ಮಹಾ ಉದಾರ, ಕಲಾಸಕ್ತ.

D ಕಡೆಯಿಂದ H ವರೆಗೆ ಸಾಗಿರುವ ಗೋಧಿರೇಖೆಯು ಶಕ್ತಿಹೀನ ವಾಗಿಯೂ, ಹೆಚ್ಚು ಭಿನ್ನಭಿನ್ನವಾಗಿಯೂ ಇರುವುದು. ಇದರಿಂದ ವ್ಯಕ್ತಿಯು ಚಂಚಲಗುಣವುಳ್ಳವನೂ, ಕಾಲಕಾಲಕ್ಕೆ ಆಹಾರವಿಲ್ಲದೆ ಗ್ಯಾಸ್ಟ್ರಿಕ್ ಮತ್ತು ನರದೌರ್ಬಲ್ಯ ರೋಗಗಳುಳ್ಳವನೂ, ಸಂಸಾರದಲ್ಲಿ ಜಾಗ್ರತೆಯುಳ್ಳವನೂ ಮತ್ತು ಮಹಿಳಿಕಾರೇಖೆಯು F ಕೀಳು, ಕವಲುಗಳಾಗಿರುವುದರಿಂದ ಯಾರ ಸಹಾಯ–ಸಲಹೆಗಳೂ ಇಲ್ಲದೆ ತಾನಾಗಿ ಪ್ರಯತ್ನಿಸಿದ ವೃತ್ತಿಶಾಖೆಗಳೆಲ್ಲಾ ಭಂಗವಾಗಿಯೂ ಇರುವುದು. B ಕಡೆಯಿಂದ A ವರೆಗೆ ಡೊಂಕವಾಗಿ ಹೊರಟಿರುವ ರಿಪುರೇಖೆ ಗೋಧಿ [H] ರೇಖೆಯ ಮೇಲೆ ಸೂಕ್ಷ್ಮವಾದ ರೇಖೆಯಿಂದೊಡಗೂಡಿದ ಕವಲುರೇಖೆ ಇವುಗಳೆಲ್ಲಾ ವ್ಯಕ್ತಿಗೆ ದುಷ್ಟ ಫಲದಾಯಕವಾಗಿರುವುವು. ಮತ್ತು ವಂಶವೃದ್ಧಿಗೂ ಭಂಗವುಂಟಾಗಿರುವುದು. ಮಧುರ, ಮಂದಾರ ರೇಖೆಗಳೂ ಇಲ್ಲವಾದ್ದರಿಂದ ವ್ಯಕ್ತಿಯು ಬಾಲ್ಯದಿಂದಲೂ ಶ್ರಮಪಟ್ಟನು. [ಮೇಲೆ ಹೇಳಿದ B. A ರಿಪುರೇಖೆಯು ವ್ಯಕ್ತಿಗೆ ಎಷ್ಟೇ ಭಾಗ್ಯಯೋಗ ಚಿಹ್ನೆಗಳಿದ್ದರೂ ನಾಶಪಡಿಸುವುದು].



V ಈ ಹೆಬ್ಬೆರಳಿನಲ್ಲಿರುವ ಚಕ್ರವು ಹೆಚ್ಚು ಭಿನ್ನವಾಗಿರುವುದು. [ಚಕ್ರಭಾಗವು ಹುಳುವು ತಿಂದಿರುವ ಎಲೆಯಂತೆ ಇರುವುದು] ೧, ೨, ೩

ಈ ಮೂರು ಭಾಗದಲ್ಲಿ ಅತಿಯಾಗಿ ಒಡೆದಿರುವುದು. ಗೋಧಿರೇಖೆಯು ೬–ಅತಿ ದಪ್ಪವಾಗಿರುವುದು. ಇದರಿಂದ ವ್ಯಕ್ತಿ ಅಲ್ಪವಿದ್ಯಾವಂತನು. ಯಂತ್ರ ಸಂಸ್ಥೆಯಲ್ಲಿ ದುಡಿವ. ಆದರೆ ೧೧ ರಿಂದ ೧೨ರ ವರೆಗೆ ವಾಲಿಕಾರೇಖೆಯು ಕೊಂಬಿನಂತೆಯೂ, ಒರಟಾಗಿಯೂ, ಮಣೆ ಇಲ್ಲದೆಯೂ ಇರುವುದರಿಂದ ದುಡಿಮೆ ಹೆಚ್ಚು, ಆದಾಯ ಅತ್ಯಲ್ಪ. ಮಾನಸಿಕ ಅಶಾಂತಿ. ೯ ರ ಕೆಳಗೆ ೧೦ ರ ಮೇಲೆ ಕಾಣುವ ರತಿರೇಖೆಯು ಸೀಳುಗಳಾಗಿ ಮತ್ತು ವಿಕಾರವಾಗಿರುವುದರಿಂದಲೂ ಪ್ರಥಮ ಭಾಗದಲ್ಲಿ ಚಕ್ರ ಗುರುತನ್ನು ೪ ಮೊಂಡಾದ ರೇಖೆಯು ಭೇದಿಸಿರುವುದರಿಂದ ಪತ್ನಿಯು ಕಠಿಣಹೃದಯದವಳು ಮತ್ತು ಪತಿಯನ್ನೇ ಆಳುವವಳೂ, ಸದಾ ಕಲಹಪ್ರಿಯಳೂ ಆಗಿದ್ದಾಳೆ. ಹಾಗೂ ೮. ೯ ಮಧುರ, ಮಂದಾರ ರೇಖೆಗಳು ಇರುವುದರಿಂದ ವ್ಯಕ್ತಿಯಲ್ಲಿ ದೈವಿಕ ಚಿಂತನ ಹೆಚ್ಚಾಗಿ ಬೆಳೆದು ಶಾಂತಿ, ತಾಳ್ಮೆ ಇರುವುದು. ೮ ರಿಂದ ೬ ನೆಯ ಗೆರೆಯ ವರೆಗೆ ಮೊಟಕುಮೊಟಕಾದ ಕೇಸರರೇಖೆಗಳೂ ಇರುವುವು. ಇದರಿಂದ ಸಂತತಿಗಳ ಸಹಾಯ ಅಲ್ಪ ಇರುವುದು.

ಮೀನಲಗ್ನವನ್ನು ಸೂಚಿಸುವ ಈ ಅಂಗುಷ್ಠಮುದ್ರೆಯು ಒಳಗಿನ ವೃತ್ತರೇಖೆಯು ಆಕಾರ ಕೀಟಗಳು ತಿಂದಂತೆ ಇರುವುದು. ಆದರೆ ಶುಕ್ರನು [೧೧°] ಮೀನದಲ್ಲಿ ಉಚ್ಚನಾದರೂ ಸಹ ಮೀನಕ್ಕೆ ೭ನೆಯ ಮನೆಯಾದ ಕನ್ಯಾ [೫°]ದಲ್ಲಿ ಇವನ ಶತ್ರುಗಹ ಗುರು, ಚಂದ್ರರಿಬ್ಬರೂ ಇರುವರು. ಇದರಿಂದ ಭಿನ್ನವಾದಂತೆ ಕಾಣುವ ಚಕ್ರವಿರುವುದು.

ಈ ಚಿತ್ರದಲ್ಲಿ ಶಿರಭಾಗವು ಭೂಪದರವನ್ನು ವಿಶೇಷವಾಗಿ ಪಡೆದಿದೆ. ಇದರಿಂದ ಮೀನಲಗ್ನದಲ್ಲಿ ೩ ಭಾಗ ಮುಗಿದಿರುವುದೆಂದು ತಿಳಿಯುವುದು.

ಕರ್ಕಾಟಕಲಗ್ನ [೩°] ದ ಅಂತ್ಯದಲ್ಲಿ ಜನಿಸಿದ ವ್ಯಕ್ತಿ. ಈ ಅಂಗುಷ್ಠದಲ್ಲಿ, ಶಿರದಲ್ಲಿ ಹಾಗೂ ಎಡಬಲ ಭಾಗಗಳಲ್ಲಿ ಆವರ್ತರೇಖೆಗಳು ದುಂಡಾಗಿರುವುವು. ಇದರಿಂದ ಕರ್ಕಾಟಕಲಗ್ನದ ಸಂಕೇತ. ಆದರ ಮಧ್ಯದಲ್ಲಿ ಸಿಂಹದ ಮುಖದ ಆಕಾರ ಸುರುವಿರುವುದರಿಂದ ಇನ್ನೇನು ಸಿಂಹಲಗ್ನ ಶುರುವಾಗುವುದೆಂದು ಸೂಚಿಸುತ್ತಾ ಇರುವುದು. ಕರ್ಕಾಟಕದಲ್ಲಿ ಜಾತಕ





Page ೩೩ರಲ್ಲಿ
ಕರ್ಕಾಟಕ ಲಗ್ನದಲ್ಲಿ
ಇದರ ವಿವರಣೆ ಇದೆ.







Page ೩೫ರಲ್ಲಿ ಸಿಂಹ
ಲಗ್ನದಲ್ಲಿ ವಿವರಣೆ
ನೋಡಿರಿ.



















Page ೧೧೬ರಲ್ಲಿ
ಈ ಚಿತ್ರಗಳ ವಿವರಣೆ
ನೋಡಿರಿ.

ರಿಗೆ ಶುಭ-ಅಶುಭ ಗ್ರಹಗಳು ಇದ್ದಕಾರಣ ಒಳಗೆ ಭಿನ್ನವೂ, ಕಿರು ದುಂಡಾಕಾರ ವೃತ್ತವು ಸೂಕ್ಷ್ಮವಾಗಿ ಕಾಣುವುದು.

ಮೇಲೆ ಹೇಳಿದ ಕರ್ಕಾಟಕಲಗ್ನದ ಅಂಗುಷ್ಠದ ಕೆಳಭಾಗದಲ್ಲಿ ಬೇರೆ ವ್ಯಕ್ತಿಯ ಹೆಬ್ಬೆರಳಿನಲ್ಲಿ ಇರುವ ಗೋಧಿರೇಖೆ [ಅನ್ನರೇಖೆ] ಯನ್ನು C, A. B ಎಂದು ಗುರುತಿಸಿರುವುದು.

ಈ ವ್ಯಕ್ತಿಯ ಜಾತಕದಲ್ಲಿ ಚಂದ್ರ, ರಾಹುಗ್ರಹಗಳು ಒಂದೇ ರಾಶಿಯಲ್ಲಿ ಇರುವವು. ಇದರಿಂದ B ಬಳಿಯಿಂದ ಹೊರಟ ಗೋಧಿರೇಖೆ ಹಾವು ಬಾಯಿ ಬಿಟ್ಟು ಇರುವಂತೆಯೂ, ಮತ್ತೊಂದು ರೇಖೆಯನ್ನು ನುಂಗುವಂತೆಯೂ ಭಾಸವಾಗುವುದು. ಇದರಿಂದ ವ್ಯಕ್ತಿಯ ತಾಯಿ, ವ್ಯಕ್ತಿಯ ಅತಿ ಚಿಕ್ಕ ವಯಸ್ಸಿನಲ್ಲಿಯೇ ವಿಯೋಗವಾದರು. B, A ಮತ್ತು C ಈ ಎರಡು ರೇಖೆಗಳು ದೂರದೂರವಿರುವುದರಿಂದ ವ್ಯಕ್ತಿ ಎಷ್ಟೇ ಸಂಪಾದಿಸಿದರೂ ಶ್ರಮ ಪರಿಹಾರವಿಲ್ಲ. ಹಾಗೂ ಮಹಾತ್ಮರು ವಾಯುರೋಗದಿಂದ ಅಂತ್ಯಗೊಂಡರು.

ದ್ವಾದಶರಾಶಿಯ ಚಕ್ರ [ Real Chakram ]

ಹನ್ನೆರಡು ಲಗ್ನದ ಅಂಗುಷ್ಠವನ್ನು ಜೋಡಿಸಿರುವುದು. O ಮೇಷ ಲಗ್ನದ ಗುರುತು ಮೀನಕ್ಕೆ ೧೧ ಸಂಖ್ಯೆ [ O to ೧೧ = ೧೨ Signs ] ಮಕರದಲ್ಲಿ ಅಷ್ಟಗ್ರಹ ಸೇರಿದ್ದಾಗ ಅದೇ ಲಗ್ನದಲ್ಲಿ ಹುಟ್ಟಿದ್ದ ವ್ಯಕ್ತಿಯ ಹೆಬ್ಬೆರಳು ಹಾಕಿದೆ. ೯, ೩ನೆಯ ಅಂಗುಷ್ಠ ವೀಕ್ಷಿಸಿ.

೧೨ ರಾಶಿಗಳಿಗೂ ರವಿಯ ಪ್ರಕಾಶ ಬೀಳುವುದರಿಂದ ನಾರಾಯಣನ ಗುರುತು ಹಾಕಿದೆ. [ಚಿತ್ರಕ್ಕೆ : ಪುಟ-೧೧೨ ನೋಡಿರಿ]

ಹರಿಃ ಓಂ